# "ಎಲೆರಾಜೋಳದ ಮುರುಘೇಂದ್ರಸ್ವಾಮಿ: ಬದುಕು-ಬರಹ"

(ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)

ಸಂಶೋಧಕ

**ಗುರುರಾಜ್ ಅ. ಮುಗಳಿ**

ಮಾರ್ಗದರ್ಶಕರು

**ಡಾ. ಹರಿಶ್ಚಂದ್ರ ದಿಕ್ಸಂಗಿಕರ್**




ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೪

"ಎಲೆರಾಜೋಳದ ಮುರುಘೇಂದ್ರಸ್ವಾಮಿ : ಬದುಕು-ಬರಹ"

(ಎಂ.ಫಿಲ್., ಪದವಿಗಾಗಿ ಸಲ್ಲಿಸುತ್ತಿರುವ ಪ್ರಬಂಧ)

ಸಂಶೋಧಕ

**ಗುರುರಾಜ್ ಅ.ಮುಗಳಿ**

ಮಾರ್ಗದರ್ಶಕರು

**ಡಾ. ಹರಿಶ್ಚಂದ್ರ ದಿಕ್ಸಂಗಿಕರ್**



ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೦೪





# ಮಾರ್ಗದರ್ಶಕರ ಪ್ರಮಾಣಪತ್ರ

''ಎಲೆರಾಜೋಳದ ಮುರುಘೇಂದ್ರಸ್ವಾಮಿ : ಬದುಕು-ಬರಹ'' ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲ ಯದ ಜಾನಪದ ಅಧ್ಯಯನ ವಿಭಾಗದಲ್ಲಿ ಎಂ.ಫಿಲ್ ಪದವಿಗಾಗಿ ಗುರುರಾಜ್ ಅ.ಮುಗಳಿ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : 2004

(ಡಾ. ಹರಿಶ್ಚಂದ್ರ ದಿಗ್ಸಂಗಿಕರ್)
ಮಾರ್ಗದರ್ಶಕರು ಮತ್ತು ಹಿ.ಶ್ರೇ.ಅಧ್ಯಾಪಕರು,
ಜಾನಪದ ಅಧ್ಯಯನ ವಿಭಾಗ,
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - 583 276.

# ಸಂಶೋಧಕನ ಪ್ರಮಾಣ ಪತ್ರ

''ಎಲೆರಾಜೋಳದ ಮುರುಘೇಂದ್ರಸ್ವಾಮಿ :ಬದುಕು-ಬರಹ'' ಎಂಬ ಪ್ರಬಂಧವನ್ನು ಡಾ।ಹರಿಶ್ಚಂದ್ರ ದಿಗ್ಸಂಗಿಕರ್ ಅವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ, ಎಂ. ಫಿಲ್. ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಜಾನಪದ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೩-೦೪-೨೦೦೪.

ಗು. ಅ. ಮುಗಳಿ

**(ಗುರುರಾಜ್ ಅ.ಮುಗಳಿ)**

ಎಂ.ಫಿಲ್. ವಿದ್ಯಾರ್ಥಿ

ಜಾನಪದ ಅಧ್ಯಯನ ವಿಭಾಗ,

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩೨೭೬.

# ಕೃತಜ್ಞತೆಗಳು

"ಎಲೆರಾಜೋಳದ ಮುರುಘೇಂದ್ರಸ್ವಾಮಿ : ಬದುಕು-ಬರಹ" ಎಂಬ ಕಿರುಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಲು ಅವಕಾಶ ಕಲ್ಪಿಸಿಕೊಟ್ಟ ಅಂದಿನ ಕುಲಪತಿಗಳಾದ ಡಾ. ಎಚ್.ಜೆ.ಲಕ್ಕಪ್ಪಗೌಡ ಹಾಗೂ ಇಂದಿನ ಪ್ರಭಾರಿ ಕುಲಪತಿಗಳು ಮತ್ತು ಕುಲಸಚಿವರಾದ ಡಾ. ಕೆ.ವಿ.ನಾರಾಯಣ ಅವರಿಗೆ ಅನಂತ ಕೃತಜ್ಞತೆಗಳನ್ನು ಅರ್ಪಿಸುವೆ. ಅಧ್ಯಯನ ಕೈಗೊಳ್ಳಲು ಆಡಳಿತಾತ್ಮಕ ಅನುಮತಿ ನೀಡಿ ಸೂಕ್ತ ಸಲಹೆ, ಸಹಕಾರ ನೀಡಿದ ಮಾನ್ಯ ಅಧ್ಯಯನಾಂಗದ ನಿರ್ದೇಶಕರಾದ ಡಾ. ಕರೀಗೌಡಬಿಚನಳ್ಳಿ ಹಾಗು ಜಾನಪದ ಅಧ್ಯಯನ ವಿಭಾಗದ ಮುಖ್ಯಸ್ಥರಾದ ಡಾ. ಸ.ಚಿ.ರಮೇಶ್, ಡಾ. ಮೊಗಳ್ಳಿ ಗಣೇಶ, ಡಾ. ಮಂಜುನಾಥ ಬೇವಿನಕಟ್ಟಿ, ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಡಾ. ಹೆಬ್ಬಾಲೆ ಕೆ.ನಾಗೇಶ್, ಡಾ. ಸಿ.ಟಿ.ಗುರುಪ್ರಸಾದ್, ಡಾ. ಚನ್ನಣ್ಣವಾಲೀಕಾರ, ಡಾ. ವೀರಣ್ಣದಂಡೆ ಇವರಿಗೆ ನನ್ನ ಕೃತಜ್ಞತೆಗಳು.

ಮುಕ್ತವಾಗಿ ಸಲಹೆಯನ್ನು ನೀಡಿದ ಆತ್ಮೀಯರಾದ ಡಾ. ಮಾರುತಿ, ಡಾ. ಚಾಜಿ ದೇವೇಂದ್ರಪ್ಪ, ಮುದ್ದುವೀರಪ್ಪ, ಪರಮಾನಂದ, ಬಸವರಾಜ, ರಾಜಶೇಖರ, ಮಹೇಂದ್ರ, ಮಲ್ಲಿಕಾರ್ಜುನ, ಶಿವಶರಣ, ಶರಣ, ಬಸವ, ಶ್ರೀನಿವಾಸ, ಶಿವಕುಮಾರ್, ಖಾಜು, ಸೌಭಾಗ್ಯ ಇವರಿಗೆ ನನ್ನ ಕೃತಜ್ಞತೆಗಳು.

ಮಗನ ಏಳ್ಗೆಗಾಗಿ ಹಗಲಿರುಳು ಶ್ರಮಿಸಿದ ಪೂಜ್ಯನೀಯ ತಂದೆ-ತಾಯಿಗೆ, ಅಣ್ಣ-ಅತ್ತಿಗೆ, ಅಕ್ಕ-ಮಾವನವರಿಗೆ ಮತ್ತು ಪ್ರೀತಿಯ ಮಗಳು ಅನುಷಳಿಗೆ ಅನಂತ ನಮನಗಳು.

ನನ್ನ ಪ್ರಬಂಧ ರಚನೆಗೆ ಗ್ರಂಥಗಳನ್ನು ನೀಡಿ ಸಹಕರಿಸಿದ ಗ್ರಂಥಾಲಯದ ಮುಖ್ಯಸ್ಥರಿಗೂ, ಸಿಬ್ಬಂದಿ ವರ್ಗದವರಿಗೂ ಸಮಸ್ತ ಕನ್ನಡ ವಿಶ್ವವಿದ್ಯಾಲಯದ ಬೋಧಕೇತರ ಸಿಬ್ಬಂದಿಯವರಿಗೂ, ಈ ಸಂಪ್ರಬಂಧವನ್ನು ಪ್ರೀತಿಯಿಂದ ಡಿ.ಟಿ.ಪಿ. ಮಾಡಿಕೊಟ್ಟ ಶ್ರೀಮತಿ ಎ.ನಾಗವೇಣಿಯವರಿಗೆ ನನ್ನ ತುಂಬು ಹೃದಯದ ಕೃತಜ್ಞತೆಗಳು.

ಗುರುರಾಜ್ ಅ.ಮುಗಳಿ

# "ಎಲೆರಾಜೋಳದ ಮುರುಘೇಂದ್ರಸ್ವಾಮಿ:ಬದುಕು-ಬರಹ"

## ಪರಿವಿಡಿ

ಸಂಶೋಧನ ಕ್ಷೇತ್ರಗಳಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ಜಾನಪದವು ಒಂದು ಶಿಸ್ತಾಗಿ ರೂಪಗೊಂಡದ್ದು ೨೦ನೇಯ ಶತಮಾನದ ಅವಧಿಯಲ್ಲಿ ಅನ್ನಿಸುತ್ತದೆ. ಮೊದಲಿದ್ದ ಜಾನಪದ ಅಧ್ಯಯನದ ಉದ್ದೇಶ ಮತ್ತು ವಿಧಾನಗಳು ಇಂದು ಬದಲಾಗುತ್ತಿವೆ. ಸಾಂಪ್ರದಾಯಿಕವಾಗಿ ಜಾನಪದ ಅಧ್ಯಯನವು ಉತ್ಪನ್ನಗಳಿಗೆ ಅಂದರೆ ಸಾಹಿತ್ಯಿಕ ಮತ್ತು ಸಾಹಿತ್ಯೇತರ ನಿರ್ಮಾಣಗಳಿಗೆ ವಿಶೇಷ ಮಹತ್ವವನ್ನು ಕೊಟ್ಟಿತು. ಜನಪದ ವ್ಯಕ್ತಿಗಳಿಂದ ಹೆಚ್ಚು ಪ್ರಮಾಣದಲ್ಲಿ ಜಾನಪದವನ್ನು ಸಂಗ್ರಹಮಾಡುವುದು ಮತ್ತು ಪ್ರಕಟಿಸುವುದು ಜಾನಪದ ಅಧ್ಯಯನದ ಮುಖ್ಯ ಗುರಿ. ಮೌಖಿಕ ಪರಂಪರೆಯಲ್ಲಿ ಇರುವ ಎಷ್ಟೋ ವಿಚಾರಗಳು ಲಿಖಿತ ಪರಂಪರೆಯಲ್ಲಿ ದಾಖಲಾಗಿಲ್ಲ. ಆದುದರಿಂದ ಮೌಖಿಕ ಪರಂಪರೆಯ ಅಂಶಗಳನ್ನು ಇತಿಹಾಸ ಪುನರಚನೆಯ ಸಂದರ್ಭದಲ್ಲಿ ಪೂರಕವಾಗಿ ಬಳಸಿಕೊಂಡರೆ ಭಾರತೀಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಗ್ರಹಿಸಿಕೊಂಡತಾಗುತ್ತದೆ. ಇಂತಹ ಮೌಖಿಕ ಪರಂಪರೆಯನ್ನು ಇಲ್ಲಿ ಹೊರಹಾಕಲಾಗಿದೆ.

ಕನ್ನಡ ನಾಡಿನ ಇತಿಹಾಸದ ಪುಟಗಳನ್ನು ತಿರುವಿದರೆ ಅನೇಕ ಸಂತರು, ಕವಿಗಳು, ರಾಜಮಹಾರಾಜರು, ಸಾಧಕರು, ಸುಧಾರಕರು, ಕಲಾವಿದರು, ವೀರರು, ವೀರಾಗ್ರಣಿಯರು ಕಂಡುಬರುತ್ತಾರೆ. ಇವರು ತಮ್ಮ ಕ್ಷೇತ್ರಗಳಲ್ಲಿ ಅತ್ಯಂತ ನಿಷ್ಠೆಯಿಂದ ದುಡಿದು ನಾಡಿಗಾಗಿ ತಮ್ಮನ್ನೇ ಅರ್ಪಿಸಿಕೊಳ್ಳಲು ಸಿದ್ಧರಾಗಿದ್ದರು. ಕನ್ನಡ ನಾಡು ಇಂದು ಸುಂದರ ನಾಡಾಗಿ ಉಳಿಯಲು ಇವರ ನಿಸ್ವಾರ್ಥ ಸೇವೆಯೇ ಕಾರಣ. ಇವರೇ ಕನ್ನಡ ನಾಡಿನ ನಿಜವಾದ ಆಸ್ತಿ.

ಕರ್ನಾಟಕದಲ್ಲಿ ನಡೆದ ಹನ್ನೆರಡನೆಯ ಶತಮಾನದ ವಚನ ಚಳುವಳಿ ಕನ್ನಡಿಗರ ಆಲೋಚನೆಯ ದಿಕ್ಕನ್ನೇ ಬದಲಾಯಿಸಿದ ಒಂದು ಮಹತ್ವದ ಕಾಲಘಟ್ಟ. ಜನಸಾಮಾನ್ಯರ ಮತ್ತು ಕೆಳವರ್ಗದವರ ಆತ್ಮವಿಶ್ವಾಸಕ್ಕೆ ಹೊಸಬೆಳಕನ್ನು ನೀಡಿದ ಈ ಘಟ್ಟ ಜನ ಭಾಷೆಗೆ ಮಾನ್ಯತೆ ನೀಡಿತ್ತಲ್ಲದೆ ಅದು ವೈಚಾರಿಕ ಚಿಂತನೆಯ ಪರಕಾಷ್ಠೆಯನ್ನು ಮುಟ್ಟಿತು. ಬಸವಾದಿ ಶರಣರ ಮಾರ್ಗದರ್ಶನವು ವಚನ ಚಳುವಳಿಯನ್ನು ನೈತಿಕತೆಯ ಕಡೆಗೆ ಕರೆದೊಯ್ಯುತ್ತಲ್ಲದೆ ಲಕ್ಷಾಂತರ ಜನರು ಇದರಿಂದ ಆಕರ್ಷಿತರಾದರು. ಹನ್ನೆರಡನೆಯ ಶತಮಾನದ ಕಾಲಕ್ಕೆ ಅತ್ಯಂತ ಪ್ರಗತಿ ಪರವಾಗಿದ್ದ ಆ ಒಕ್ಕೂಟ ನಂತರದಲ್ಲಿ ಒಂದು ಜಾತಿಯಾಗಿ ಮಾರ್ಪಟ್ಟು ಕೆಲವು ಕಟ್ಟುಪಾಡುಗಳನ್ನು ವಿಧಿಸಿಕೊಂಡು ತನ್ನ ಕಂದಕವನ್ನು ತಾನೇ ತೋಡಿಕೊಂಡಾಗ, ಬೇಸತ್ತ ಇತರ ಜನರು, ಈ ಒಕ್ಕೂಟದಿಂದ ಸಿಡಿದು ಮೊದಲ ಬಾರಿಗೆ ಬೀದಿಗೆ ಬಂದು ತದನಂತರದ ಅನಿರೀಕ್ಷಿತ ಸೋಲಿನಿಂದಾಗಿ ತಮ್ಮ ತಮ್ಮ ದಾರಿಗಳನ್ನು ಹಿಡಿದರು. ಇದರಿಂದಾಗಿ ಕಲ್ಯಾಣ ರಾಜ್ಯದಲ್ಲಿ ಲೂಟಿ, ಕಳವು, ದಂಗೆ, ಗಲಭೆ ಕೊನೆಗೆ ಬಿಜ್ಜಳ ಅರಸನ ಕೊಲೆಯು ನಡೆದು ಕಲ್ಯಾಣ ನಾಡು ಇತಿಹಾಸದ ಕಾಲಗರ್ಭಕ್ಕೆ ಸೇರಿತು.

"ಶರಣರ ಪ್ರಭಾವ ಈ ನೆಲದ ಮೇಲೆ ಜೀವಂತ ತೊರೆಯಾಗಿ ಹರಿದ ಕಾರಣ ಅವರ ಚರಿತ್ರೆ ಪ್ರಾಂತ್ಯಗಳಲ್ಲಿ ಪ್ರವಹಿಸಿ, ಗ್ರಾಮಗಳಲ್ಲಿ ವ್ಯಾಪಿಸಿ, ವ್ಯಕ್ತಿ-ವ್ಯಕ್ತಿಗಳ ಹೃದಯ ಹೊಲವನ್ನು ಹಸಿಗೊಳಿಸಿ ಮುನ್ನಡೆಯಿತು. ಹೀಗಾಗಿ ಒಂದೊಂದು ಪ್ರಾಂತ್ಯ-ಗ್ರಾಮ-ವ್ಯಕ್ತಿಗಳು ತಮಗೆ ತೃಪ್ತಿಯಾಗುವ ರೀತಿಯಲ್ಲಿ ಶರಣರನ್ನು ಕೊಂಡಾಡಿದರು. ಅವರ ಚರಿತ್ರೆಗೆ ಅನೇಕ ತಿರುವುಗಳನ್ನು ಕಲ್ಪಿಸಿದರು. ಇದರ ಫಲವಾಗಿ ಶರಣರನ್ನು ಕುರಿತು ಐತಿಹ್ಯಗಳು ಸಾವಿರ ವಿಧದಲ್ಲಿ ಬೆಳೆದು ನಿಂತು, ಇವುಗಳಲ್ಲಿಯ ಕೆಲಮಟ್ಟಿನ ಸತ್ಯವೂ ಸಂಶಯಕ್ಕೆ ಎಡೆಮಾಡಿತು"[೧] ಎಂಬ ಮಾತು ಮುಖ್ಯವಾಗಿ ಬಸವಾದಿ ಪ್ರಥಮರನ್ನು ಕುರಿತು ಹೇಳಿದುದಾದರೂ ಇದು ಮುಂದೆ ಬರುವ ಎಲ್ಲ ತತ್ವಪದಕಾರರಿಗೂ ಅನ್ವಯಿಸುತ್ತದೆ. ಇದಕ್ಕೆ ಮುರುಘೇಂದ್ರಸ್ವಾಮಿಗಳು ಹೊರತಾಗಿಲ್ಲ.

ಕ್ರಿ.ಶ. ಸುಮಾರು ೧೮೮೫ರಲ್ಲಿ ಶರಣಯ್ಯ ಮತ್ತು ಬಸಲಿಂಗಮ್ಮನವರ ಮಡಿಲಲ್ಲಿ, ಮುರುಘೇಂದ್ರಸ್ವಾಮಿಗಳು ಗುಲಬರ್ಗಾ ಜಿಲ್ಲೆಯ ಅಫಜಲ್‌ಪುರ ತಾಲೂಕಿನ ಗೌಡಗಾಂವದಲ್ಲಿ ಜನಿಸಿ ಮುಂದೆ ಸೇಡಂ ತಾಲೂಕಿನ ಎಲೆರಾಜೋಳದಲ್ಲಿ ತಮ್ಮ ಮುಂದಿನ ಜೀವನ ಕಳೆದರು.

ವಚನ ಚಳವಳಿಯ ನಂತರ ಮತ್ತೊಮ್ಮೆ ಈ ಭಾಗದಲ್ಲಿ ಕನ್ನಡ ತಲೆಯೆತ್ತಿದ್ದು ಪ್ರಮುಖವಾಗಿ ತತ್ವಪದಕಾರರ ಸಂದರ್ಭದಲ್ಲಿ. ಅಂದಿನ ದಿನಗಳಲ್ಲಿ ಹೈದರಾಬಾದ್-ಕರ್ನಾಟಕದ ಅನೇಕ ಭಾಗಗಳಲ್ಲಿ ಕನ್ನಡ ಜನಸಾಮಾನ್ಯರ ಮನೆಯಲ್ಲಿ ಅಡಗಿಕುಳಿತಿತ್ತು. ಹೊರ ಬಂದು ಧೈರ್ಯವಾಗಿ ಮುನ್ನಡೆಯಬೇಕೆಂದರೆ ಉರ್ದುವಿನ ಆರ್ಭಟಕ್ಕೆ ಎದುರಾಗಿ ನಿಲ್ಲುವ ಶಕ್ತಿ ಅದಕ್ಕಿರಲಿಲ್ಲ. ರಾಜ ಭಾಷೆಯ ಜೊತೆ ಕನ್ನಡ ಬೆಳೆಯುವುದು ತೀರ ಕಷ್ಟವಾಗಿತ್ತು. ಕೇವಲ ಪಟ್ಟಣ-ನಗರಗಳಲ್ಲಿ ಕಂಡು ಬರುತ್ತಿದ್ದ ಕನ್ನಡ ಗಡಿಗ್ರಾಮಗಳಲ್ಲಿ ಅದರ ಹೆಸರೇ ಇರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮುರುಘೇಂದ್ರಸ್ವಾಮಿಗಳು ಕರ್ನಾಟಕಾಂಧ್ರದ ಗಡಿಯಲ್ಲಿ ಕನ್ನಡವನ್ನು ಉಳಿಸಿ ಬೆಳೆಸಿದರು. ಸಮಾಜ ಕಲ್ಯಾಣ, ಲೋಕೋದ್ಧಾರಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿದ ಮುರುಘೇಂದ್ರಸ್ವಾಮಿ ಲೋಕ ಸಂಚಾರ ಕೈಗೊಂಡು ಎಲೆರಾಜೋಳದಲ್ಲಿ ನೆಲೆ ನಿಂತು 'ಎಲೆರಾಜೋಳದ ಶ್ರೀ ಮುರುಘೇಂದ್ರಸ್ವಾಮಿ' ಎಂದೇ ಎಲ್ಲರಿಗೂ ಚಿರಪರಿಚಿತರಾದರು.

ತಮ್ಮ ಸುತ್ತಮುತ್ತಲಿನ ಸಮಾಜದಲ್ಲಿನ ತೊಡಕು-ಆತಂಕ, ವರ್ಗ-ಸಂಘರ್ಷ, ವರ್ಣ-ಭೇದ, ಅಕ್ರಮ ಸಂಬಂಧಗಳನ್ನು, ಖಂಡತುಂಡವಾಗಿ ತಮ್ಮ ಹಾಡುಗಳ ಮೂಲಕ ಹೇಳುತ್ತಾ ಅದರಿಂದಾಗುವ ಪರಿಣಾಮವನ್ನು ತಿಳಿಸುತ್ತ ಸಮಾಜ ಸುಧಾರಕರಾಗಿ ಮುರುಘೇಂದ್ರಸ್ವಾಮಿಗಳು ಕೆಲಸ ಮಾಡಿದ್ದಾರೆ. ತಮ್ಮ ಜೀವನದಲ್ಲಿ ಕಂಡುಂಡ ಅನುಭವಗಳನ್ನು, ಹಾಡಿನ ರೂಪದಲ್ಲಿ ರಚಿಸಿ ಜನರನ್ನು ಸನ್ಮಾರ್ಗಗಳ ಕಡೆಗೆ ಕರೆದೊಯ್ದರು.

ಮುರುಘೇಂದ್ರಸ್ವಾಮಿ ಜನಪದ ಸಾಹಿತ್ಯದಲ್ಲಿ ಅನೇಕ ಹಾಡುಗಳನ್ನು ರಚಿಸಿದ್ದಾರೆ. ಹಿರಿಯ ಸಹೋದರನಾದ ಕರಿಘೂಳೇಶ್ವರರೆ ಗುರುಗಳಾಗಿದ್ದರಿಂದ ತಮ್ಮ ಹಾಡುಗಳಲ್ಲಿ ಅವರ ಅಂಕಿತವನ್ನೇ ಬಳಸಿದ್ದಾರೆ.

"ಹಾಂಗ್ಯಾಗ ಹೀಂಗ ಉರ್‍ರಿ ಮಟಕ

ಸಂಗಮ ಮೇಲಿನ ಬಾಟಕ

ತ್ರಿಕೂಟ ಕಮಲದ ಘಾಟಕ

ಬ್ರಹ್ಮನ ಐಶ್ವರ್ಯ ನೋಡದಕ

ಉತ್ತರ ಕಿಡಿಕಿ ಕೋಲ್ಯಾಕ

....................

....................

ಅರಸ ಯೋಗದೊಳು ನೇಮಕ

ಕರಿಘೂಳೇಶನ ಸೇವಕ

ಕರೆದರೆ ಬರುವನು ಭಾವಕ

ಸುಲಭದಿ ಕೊಡುವನು ಬ್ರಹ್ಮ ಸುಖ"[೨]

ಮುರುಘೇಂದ್ರಸ್ವಾಮಿಗಳು ಕನ್ನಡ, ತೆಲುಗು, ಹಿಂದಿ, ಉರ್ದು ಭಾಷೆಗಳನ್ನು ಓದಲು ಮತ್ತು ಬರೆಯಲು ಬಲ್ಲವರಾಗಿದ್ದು, ದೇವರ ನಾಮಗಳು, ಭಜನೆ ಪದಗಳು, ಸೋಬಾನದ, ವಿರಕ್ತಿಯ, ಹಂತಿಯ, ಹಾಡುಗಳನ್ನು ಈ ಭಾಷೆಗಳಲ್ಲಿ ರಚಿಸಿದರು. ಕನ್ನಡವನ್ನು ಉಳಿಸಿ ಬೆಳೆಸುವ ಸಂಕಲ್ಪ ಇವರದ್ದಾಗಿದ್ದರಿಂದ ಹೆಚ್ಚಾಗಿ ಕನ್ನಡದಲ್ಲಿಯೇ ತತ್ವಪದಗಳನ್ನು ರಚಿಸಿದ್ದಾರೆ.

ಕೇವಲ ಹಾಡುಗಳಲ್ಲದೇ ಮಹತ್ವದ ಕೃತಿಗಳನ್ನು ಮುರುಘೇಂದ್ರಸ್ವಾಮಿ ರಚಿಸಿದ್ದಾರೆ. ಅಪರೋಕ್ಷ ಜ್ಞಾನಪ್ರದೀಪಿಕಾ ಎಂಬ ಕೃತಿಯಲ್ಲಿ ಆಧ್ಯಾತ್ಮಿಕ ನೆಲೆಯ ದೈವತ್ವವನ್ನು ಪ್ರತಿಪಾದಿಸುವ ವಾದದ ಮಂಡನೆಯಾಗಿದೆ. ನಿಜಾನಂದ ಕೈವಲ್ಯ, ರಮ್ಲಶಾಸ್ತ್ರ, ಘಟಚಕ್ರಗಳು ಮುರುಘೇಂದ್ರಸ್ವಾಮಿಗಳ ಇತರ ಕೃತಿಗಳಾಗಿವೆ. ಅರವತ್ತು ಮೂರು ಪುರಾತನರ ಚರಿತ್ರೆ ಹೇಳುವ ಕವಿಯಾಗಿ, ನಾಟಕಕಾರರಾಗಿ ಕಂಡುಬರುವ ಮುರುಘೇಂದ್ರಸ್ವಾಮಿಗಳು ಒಬ್ಬ ಸಾಮಾನ್ಯ ಮನುಷ್ಯ ಅವರು ಜನಸಾಮಾನ್ಯರ ನಡುವೆ ಬೆರೆತು ಅನೇಕ ಪವಾಡಗಳನ್ನು ಮಾಡಿ ಇಂದು ದೇವರಾಗಿ ಪೂಜೆಗೊಳಪಡುತ್ತಿದ್ದಾರೆ ಅನೇಕ ಭಕ್ತ ಸಮೂಹವನ್ನು, ಅನುಯಾಯಿಗಳನ್ನು ಹೊಂದಿರುವ ಇವರ ಬಗ್ಗೆ ಅಧ್ಯಯನ ಮಾಡಲು ಆಸಕ್ತಿ ಮೂಡಿಸುತ್ತದೆ.

ಮುರುಘೇಂದ್ರಸ್ವಾಮಿಗಳು ಅನೇಕ ಮಹತ್ವದ ಕೃತಿಗಳನ್ನು ರಚಿಸಿದ್ದಾರೆ. ಆದರೆ ನಾನು ಇಲ್ಲಿ 'ಮುರುಘೇಂದ್ರಸ್ವಾಮಿ:ಬದುಕು-ಬರಹ' ಎಂಬ ಶೀರ್ಷಿಕೆಯ ಅಡಿಯಲ್ಲಿ ಈ ಕಿರು ಪ್ರಬಂಧ ಮಂಡಿಸುತ್ತಿದ್ದು

ಮುರುಘೇಂದ್ರರ ಜೀವನ ಮತ್ತು ಅವರು ರಚಿಸಿದ 'ನಿಜಾನಂದ ಕೈವಲ್ಯ'ದಲ್ಲಿನ ಸುಮಾರು ಮೂರು ನೂರು ತತ್ವಪದಗಳನ್ನು ಅಧ್ಯಯನಕ್ಕೆ ತೆಗೆದುಕೊಳ್ಳದೇ ಮುರುಘೇಂದ್ರಸ್ವಾಮಿಗಳ ದೃಷ್ಟಿಯಿಂದ ಪ್ರಮುಖ ಎಂದು ಕಂಡು ಬರುವಂತಹವುಗಳನ್ನು ಇಲ್ಲಿನ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಮುರುಘೇಂದ್ರಸ್ವಾಮಿಗಳ ಬಗ್ಗೆ ಅಧ್ಯಯನ ಮಾಡಲು ನನಗೆ ನಾಲ್ಕು ಉದ್ದೇಶಗಳು ಮುಖ್ಯವಾಗಿವೆ.

೧. ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ತತ್ವಪದಕಾರನ ಮತ್ತು ಅವನಿಂದ ನಿರ್ಮಿತವಾದ ಸಾಹಿತ್ಯವನ್ನು ಜನಪದರು ಹೇಳುವ ರೀತಿಯಲ್ಲಿ ಸಂಗ್ರಹಿಸಿ, ವಿಶ್ಲೇಷಿಸುವುದು.

೨. ಮುರುಘೇಂದ್ರಸ್ವಾಮಿಯ ಬದುಕಿನ ಬಗ್ಗೆ ಲಿಖಿತ ಚರಿತ್ರೆ ಮತ್ತು ಮೌಖಿಕ ಚರಿತ್ರೆಯ ಸಾಕ್ಷಿಗಳನ್ನು ಈ ಆಧುನಿಕ ಕಾಲದ ಸಂದರ್ಭಕ್ಕೆ ಹೊಂದಿಸಿ ನಿಜವಾದ ಸತ್ಯವನ್ನು ಪರಿಶೀಲಿಸುವುದು.

೩. ಪ್ರಕ್ಷುಬ್ದ ಕಾಲದಲ್ಲಿ ತಮ್ಮ ಜೀವನ ಕ್ರಮದಿಂದ, ಮತ್ತು ತತ್ವಪದಗಳಿಂದ ಜನ ಸಮುದಾಯಗಳ ಮೇಲೆ ಪ್ರಭಾವಬೀರಿ ಅವರ ಬದುಕಿನಲ್ಲಿ ನೆಮ್ಮದಿಯನ್ನು ಮೂಡಿಸಿದ್ದು.

೪. ಈ ಪ್ರಾಂತ್ಯದಲ್ಲಿ ಬಹುಭಾಷೆಗಳ ಒತ್ತಡದಿಂದ ಕನ್ನಡ ಭಾಷೆ ಬರಹದಿಂದಲೂ ಮಾತನಾಡುವುದರಿಂದಲೂ ಹಿನ್ನೆಲೆಗೆ ಸರಿದು ಹೋಗಿತ್ತು. ಇಂಥ ಸಂದರ್ಭದಲ್ಲಿ ತಮ್ಮ ತತ್ವಪದ ಸಾಹಿತ್ಯದಲ್ಲಿ ಕನ್ನಡವನ್ನು ಬಳಸಿ, ಬೆಳೆಸಿದ್ದು.

ಈ ಮೇಲಿನ ನಾಲ್ಕು ಅಂಶಗಳಿಂದ ಮುರುಘೇಂದ್ರಸ್ವಾಮಿಗಳು ಈ ಸಮಾಜಕ್ಕೆ ಹೇಳಬೇಕೆಂದಿರುವ ವಿಷಯಗಳನ್ನು ನಾನು ಸಂಗ್ರಹಿಸಿ, ವಿಶ್ಲೇಷಿಸಿದ್ದೇನೆ. 'ಎಲೆರಾಜೋಳದ ಮುರುಘೇಂದ್ರಸ್ವಾಮಿ: ಬದುಕು-ಬರಹ' ಎಂಬ ಶೀರ್ಷಿಕೆಯಡಿಯಲ್ಲಿ ನನ್ನ ಈ ಸಂಶೋಧನೆಯ ಕಿರು ಪ್ರಬಂಧ ರಚನೆಗೊಂಡಿದೆ.

**ಅಧ್ಯಯನದ ವ್ಯಾಪ್ತಿ**

ಪ್ರಸ್ತುತ ಅಧ್ಯಯನದ ಹೈದರಾಬಾದ್-ಕರ್ನಾಟಕ ಪ್ರದೇಶದ ಗುಲಬರ್ಗ ಮತ್ತು ರಾಯಚೂರು ಜಿಲ್ಲೆಗಳನ್ನು ವ್ಯಾಪ್ತಿಯಾಗಿಸಿಕೊಂಡಿದೆ. ಈ ಜಿಲ್ಲೆಗಳಲ್ಲದೆ ಅಕ್ಕಪಕ್ಕದ ಪ್ರದೇಶಗಳನ್ನು ಸಂದರ್ಭ ಬಂದಲ್ಲಿ ಬಳಸಲಾಗಿದೆ.

**ಅಧ್ಯಯನದ ಆಕರಗಳು**

ಪ್ರಸ್ತುತ ಅಧ್ಯಯನಕ್ಕೆ ಎರಡು ರೀತಿಯ ಆಕರಗಳನ್ನು ಪ್ರಮುಖವಾಗಿ ಉಪಯೋಗಿಸಿಕೊಳ್ಳಲಾಗಿದೆ. ಅವು ಇಂತಿವೆ. ಅ. ಮೂಲ ಆಕರ ಸಾಮಗ್ರಿ ಬ. ಅನುಷಂಗಿಕ ಆಕರ ಸಾಮಗ್ರಿ

ಅ.ಮೂಲ ಆಕರ ಸಾಮಗ್ರಿ

೧. ಕ್ಷೇತ್ರ ಕಾರ್ಯದ ಮಾಹಿತಿಗಳು

೨. ಲಿಖಿತ ಆಕರಗಳು

೩. ಧ್ವನಿ ಸುರಳಿಗಳು

೪. ಭಾವಚಿತ್ರಗಳು, ನಕ್ಷೆಗಳು

೧. ಕ್ಷೇತ್ರ ಕಾರ್ಯ

ಈ ಪ್ರಬಂಧಕ್ಕೆ ಬೇಕಾದ ಪ್ರಾಥಮಿಕ ಮಾಹಿತಿಗಳನ್ನು ವ್ಯಾಪಕವಾದ ಕ್ಷೇತ್ರಕಾರ್ಯದಿಂದ ಸಂಗ್ರಹಿಸಿಕೊಳ್ಳಲಾಗಿದೆ. ಎಲೆರಾಜೋಳದ ಮುರುಘೇಂದ್ರಸ್ವಾಮಿಗಳಂಥಹ ಶರಣರ ಚರಿತ್ರೆ ಕಟ್ಟುವಲ್ಲಿ ಲಿಖಿಸ ಸಾಮಗ್ರಿಗಿಂತ ಮುಖ್ಯವಾಗಿ ಕ್ಷೇತ್ರಕಾರ್ಯ ಮಹತ್ವದ್ದಾಗಿದೆ. ಜನ ಸಮೂಹದ ಮಧ್ಯದಲ್ಲಿ ಅರಳಿ, ಜನಮನದ ಹೃದಯ ಮಂದಿರದಲ್ಲಿ ನಿತ್ಯ ಜ್ಯೋತಿಯಾಗಿ ಬೆಳಗಿದವರು ಇವರಾದುದರಿಂದ ಆರಾಧನೆ, ಜಾತ್ರೆ, ಉತ್ಸವಗಳಲ್ಲಿ ಜನಪದರು ಇವರ ಜೀವನವನ್ನು ಕುರಿತು ಕತೆ ಕಟ್ಟಿ ಹಾಡುತ್ತಾರೆ. ಇಂಥ ಸಂದರ್ಭಗಳಲ್ಲಿ ರಚಿತವಾದ ಗೀತ ಸಾಮಾಗ್ರಿ ವೈವಿಧ್ಯಮಯವಾಗಿ ದೊರಕುತ್ತವೆ. ಮುರುಘೇಂದ್ರಸ್ವಾಮಿಯ ಮಠಮಂದಿರಗಳೆಲ್ಲಿವಿಯೋ ಅಲ್ಲಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ. ಇತ್ತೀಚೆಗೆ ಮುರುಘೇಂದ್ರಸ್ವಾಮಿಗಳ ಜಾತ್ರೆ-ಉತ್ಸವಗಳು ನಡೆದ ಸ್ಥಳಗಳಿಗೆ ಭೇಟಿಕೊಟ್ಟು, ಅಲ್ಲಿಂದ ವಿವರಗಳನ್ನು, ಮಾಹಿತಿಯನ್ನು ದಾಖಲಿಸಲಾಗಿದೆ. ಜಾತ್ರೆಯಲ್ಲಿ ಸಕ್ರಿಯ ಪಾತ್ರವಹಿಸುವ ಹಿರಿಯರನ್ನು ಸಂದರ್ಶಿಸಿ, ಅವರಿಂದ ವಿಷಯ ಸಂಗ್ರಹಿಸಲಾಗಿದೆ. ಮಾಹಿತಿಗಳನ್ನು ಸಂಗ್ರಹಿಸುವಾಗ ಆದಷ್ಟು ವಿವರವಾಗಿ ಕ್ಷೇತ್ರಕಾರ್ಯದ ಎಲ್ಲ ವಿಧಿವಿಧಾನಗಳನ್ನು ಅನುಸರಿಸಿ; ಮುಖ್ಯವಾಗಿ ಸಂದರ್ಶನ, ಪ್ರಶ್ನಾವಳಿ ಮತ್ತು ಅವಲೋಕನ ವಿಧಾನಗಳನ್ನು ಬಳಸಿ ಕ್ಷೇತ್ರಕಾರ್ಯವನ್ನು ಮಾಡಲಾಗಿದೆ.

೨. ಲಿಖಿತ ಆಕರಗಳು

`ಎಲೆರಾಜೋಳದ ಮುರುಘೇಂದ್ರಸ್ವಾಮಿ: ಬದುಕು-ಬರಹ`ಕ್ಕೆ ಸಂಬಂಧಪಟ್ಟಂತೆ ಕೆಳಗಿನ ಲಿಖಿತ ಆಕರಗಳಿಂದ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ.

| ಕ್ರ.ಸಂ | ಕೃತಿ | ಕೃತಿಕಾರ/ಸಂಗ್ರಹಕಾರ | ಪ್ರಕಾಶಕರು ಮತ್ತು ವರ್ಷ |
|---|---|---|---|
| ೧. | ನಿಜಾನಂದ ಕೈವಲ್ಯ | ರಾಮಲಿಂಗ ಮತ್ತು ಮುರುಘೇಂದ್ರಸ್ವಾಮಿ | ಶಂಕರಾನಂದ ಪ್ರಿಂಟಿಂಗ್ ಪ್ರೆಸ್, ಯಾದಗಿರಿ |

| | | | |
|---|---|---|---|
| ೨. | ಶ್ರೀ ಕರಿಘೂಳೇಶ್ವರ ಮಹಾತ್ಮೆ(ಮೂರುಮುತ್ತುಗಳು) | ಎಲ್.ಬಿ.ಕೆ. ಅಲ್ದಾಳ | ಶ್ರೀ ರಾಮಲಿಂಗೇಶ್ವರ ತರುಣ ಸಂಘ, ಹಂಗನಳ್ಳಿ, ತಾ. ಸೇಡಂ, ೧೯೯೩ |
| ೩. | ಶ್ರೀ ಕರಿಘೂಳೇಶ್ವರ ತತ್ವಪದಗಳು | ಸೋಮಶೇಖರಪ್ಪ ಎಂ. | ಶ್ರೀ ಶರಣ ಪ್ರಕಾಶನ, ಕಲಬುರ್ಗಿ-ಎಸ್.ಬಾವಿಕಟ್ಟಿ, ಗುಲಬರ್ಗಾ, ೨೦೦೩ |

ಲಿಖಿತ ಆಕರಗಳಿಂದ ಮುರುಘೇಂದ್ರಸ್ವಾಮಿಗಳ ಕುರಿತಾದ ಮಾಹಿತಿಗಳು ಲಭ್ಯವಾಗಿದ್ದು, ಪ್ರಸ್ತುತ ಪ್ರಬಂಧದ ರಚನೆಯಲ್ಲಿ ಇವುಗಳನ್ನು ಸಂದರ್ಭಾನುಸಾರ ಬಳಸಿಕೊಳ್ಳಲಾಗಿದೆ.

### ೩. ಧ್ವನಿಸುರುಳಿ

ಮುರುಘೇಂದ್ರಸ್ವಾಮಿಗಳ ಶಿಷ್ಯರಾದ ಯಾದಗಿರಿಯ ಭೀಮಾಶಂಕರ ಕಟ್ಟಿಮನಿಯವರು ಅಶ್ವಿನಿ ಕ್ಯಾಸೆಟ್ ಕಂಪನಿಯಲ್ಲಿ ಶ್ರೀ ಕರಿಘೂಳೇಶ್ವರ ತತ್ವಪದಗಳು ಭಾಗ-೧ ಮತ್ತು ಭಾಗ-೨ರಲ್ಲಿ ಒಟ್ಟು ೧೩ ಭಜನೆಯ ಹಾಡುಗಳನ್ನು ಭಜನಾ ಮಂಡಳಿಯ ಮೂಲಕ ಹೊರತಂದಿದ್ದಾರೆ. ಈ ಅಧ್ಯಯನದಲ್ಲಿ ಆ ಒಟ್ಟು ಹಾಡುಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

### ಬ. ಅನುಷಂಗಿಕ ಆಕರ ಸಾಮಗ್ರಿಗಳು

ಅನುಷಂಗಿಕ ಆಕರ ಸಾಮಗ್ರಿಗಳು ಸಿದ್ಧವಾಗಿರುವ ಆಕರ ಸಾಮಗ್ರಿಗಳಾಗಿದ್ದು ಈ ಅಧ್ಯಯನದಲ್ಲಿ ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳನ್ನು ಪಿ.ಎಚ್.ಡಿ, ಎಂ.ಫಿಲ್., ಪ್ರಬಂಧಗಳು, ನಿಘಂಟುಗಳು, ವಿಶ್ವಕೋಶಗಳು, ಗೆಜೆಟಿಯರ್ಸ್, ಪತ್ರಿಕೆಗಳು, ಸ್ಮರಣಸಂಚಿಕೆಗಳು, ನಕ್ಷೆಗಳು ಮತ್ತು ಅಭಿನಂದನಾ ಗ್ರಂಥಗಳನ್ನು ಬಳಸಿಕೊಳ್ಳಲಾಗಿದೆ.

### ಅಧ್ಯಯನದ ವಿಧಾನ

ಪ್ರಸ್ತುತ ಪ್ರಬಂಧದ ಒಡಲಲ್ಲಿ ಒಟ್ಟು ಆರು ಅಧ್ಯಾಯಗಳಿವೆ. ಪ್ರತಿಯೊಂದು ಅಧ್ಯಾಯವು ಹೆಚ್ಚಾಗಿ ಕ್ಷೇತ್ರಕಾರ್ಯದ ಮಾಹಿತಿಗಳನ್ನು ಒಳಗೊಂಡಿದ್ದು, ಅಗತ್ಯವಿದ್ದಲ್ಲಿ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಆದಷ್ಟು ಅಧ್ಯಯನವನ್ನು ಸಮಗ್ರವಾದ ರೀತಿಯಲ್ಲಿ ಸಿದ್ಧಪಡಿಸಲು ಪ್ರಯತ್ನಿಸಲಾಗಿದೆ. ಇದೊಂದು ಕ್ಷೇತ್ರಕಾರ್ಯ ಆಧಾರಿತ ಅಧ್ಯಯನವಾಗಿದ್ದು, ವಿಶ್ಲೇಷಣೆಗಿಂತ ಮಾಹಿತಿಗಳನ್ನು ದಾಖಲಿಸುವುದರ ಕಡೆಗೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿದೆ. ಮುರುಘೇಂದ್ರಸ್ವಾಮಿಯವರಿಗೆ ಸಂಬಂಧಪಟ್ಟ ಪ್ರತಿಯೊಬ್ಬರಿಂದಲೂ ಮಾಹಿತಿಗಳನ್ನು ಪ್ರಶ್ನಾವಳಿಯ ಮೂಲಕ ಸಂಗ್ರಹಿಸಲಾಗಿದೆ. ಹಲವಾರು ಛಾಯಚಿತ್ರಗಳನ್ನು ಪಡೆದು ವಿಷಯಕ್ಕೆ ನ್ಯಾಯ ಒದಗಿಸಲಾಗಿದೆ. ಸಂಬಂಧಪಟ್ಟ ಸಂಘ-ಸಂಸ್ಥೆ, ಸರಕಾರಿ ಇಲಾಖೆಗಳ ಸಹಾಯ ಪಡೆದೆ ಅಲ್ಲಿಂದ ಅಂಕಿಅಂಶಗಳನ್ನು ಪಡೆದು ಸೂಕ್ತ ಕಡೆಗಳಲ್ಲಿ ಬಳಸಲಾಗಿದೆ.

ಒಟ್ಟಾರೆ ನನ್ನ ಅಧ್ಯಯನದ ಕಾಲಮಿತಿಯೊಳಗೆ ಮುರುಘೇಂದ್ರಸ್ವಾಮಿಯ ಬದುಕು-ಬರಹ ಎಂಬ ಈ ಕಿರು ಪ್ರಬಂಧವನ್ನು ಸಿದ್ಧಪಡಿಸಿದ್ದು, ಈ ನನ್ನ ಕಿರು ಪ್ರಬಂಧ ಮುಂದಿನ ಅಧ್ಯಯನಕಾರರಿಗೆ ಸಹಕಾರಿಯಾಗಬಲ್ಲದು ಎಂಬ ನಂಬಿಕೆ ನನಗಿದೆ.

**ಅಡಿ ಟಿಪ್ಪಣಿಗಳು**

೧. ಶಾಸನಗಳಲ್ಲಿ ಶಿವಶರಣರು, ಪು.೬

೨. ನಿಜಾನಂದ ಕೈವಲ್ಯ, ಪು.೭೨

❑❑

ಶತಮಾನಗಳ ಸುದೀರ್ಘ ಮತ್ತು ಉಜ್ವಲ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ಜಾನಪದ ಕ್ಷೇತ್ರ ಕನ್ನಡ ನಾಡಿಗೆ ವಿಶಿಷ್ಟ ಕಾಣಿಕೆಯನ್ನು ನೀಡಿದೆ. ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಕತ್ತಲಯುಗವೆಂದು ಗುರುತಿಸುವ ೧೮ನೇ ಶತಮಾನದಲ್ಲಿ ತತ್ವಪದ ಸಾಹಿತ್ಯ ಈ ತೊಡಕನ್ನು ಕಳೆದು ಮತ್ತೊಮ್ಮೆ ಸಾಹಿತ್ಯ ಚರಿತ್ರೆಯ ಸುವರ್ಣಯುಗ ತಂದಿರಿಸಿತು. ಉತ್ತರ ಕರ್ನಾಟಕದಲ್ಲಿ ಮುಸ್ಲಿಂಮರ ಆಡಳಿತದಿಂದ ಕನ್ನಡ ಭಾಷೆ ಮತ್ತು ಭಾಷಿಗರು ಹಾಗೂ ಇಲ್ಲಿನ ದೇಶಿ ಸಂಸ್ಕೃತಿ ನಿರಂಕುಶ ಪ್ರಭುತ್ವದ ಅಡಿಯಲ್ಲಿ ಉಸಿರುಗಟ್ಟಿದ್ದವು. ಇಲ್ಲಿನ ಮೂಲ ಭಾಷೆ ಮತ್ತು ಸಂಸ್ಕೃತಿಗಳು ಕತ್ತಲನ್ನು ಅಮುಕಿದ್ದವು. ಇಂತಹ ಪರಿಸ್ಥಿತಿಯಲ್ಲಿ ತತ್ವಪದಕಾರರು ಜನಸಾಮಾನ್ಯರ ಆಡುಮಾತಿನಲ್ಲಿ ತತ್ವಪದಗಳನ್ನು ರಚಿಸಿ ಜನರ ಜೀವನ ಸುಧಾರಿಸಲು ಪ್ರಯತ್ನಪಟ್ಟರು ಅದು ಯಶಸ್ವಿಯೂ ಆಯಿತು. ಈ ತತ್ವಪದಕಾರರ ಪರಂಪರೆಯಲ್ಲಿ ಮುರುಘೇಂದ್ರ ಸ್ವಾಮಿಯು ಒಬ್ಬರಾಗಿ ಕಂಡುಬರುತ್ತಾರೆ.

ಮುರುಘೇಂದ್ರಸ್ವಾಮಿಯು ಜನಿಸಿದ ಗೌಡಗಾಂವ ಗ್ರಾಮ ಗುಲಬರ್ಗಾ ಜಿಲ್ಲೆಯ ಗಡಿಗ್ರಾಮ. ಈ ಗ್ರಾಮಕ್ಕೆ ಮಹಾರಾಷ್ಟ್ರ ರಾಜ್ಯದ ಅಕ್ಕಲಕೋಟೆ ಜಿಲ್ಲೆಯ ಗಡಿ ಹತ್ತಿಕೊಂಡಿದೆ. ಗೌಡಗಾಂವ ಗ್ರಾಮ ಇಂದಿಗೂ ತನ್ನ ಒಡಲಲ್ಲಿ ಅನೇಕ ಮಹತ್ವದ ಘಟನೆಗಳನ್ನು ಅಡಗಿಸಿಕೊಂಡಿದೆ. ಸ್ವಾತಂತ್ರ ಸಂಗ್ರಾಮದ ಸಂದರ್ಭದಲ್ಲಿ ಹೈದರಾಬಾದ್-ಕರ್ನಾಟಕ ಭಾಗದಲ್ಲಿ ಹುಟ್ಟಿಕೊಂಡ ಸ್ವಾತಂತ್ರ ಚಳುವಳಿಯ ವಿಮೋಚನಾ ಶಿಬಿರಗಳಲ್ಲಿ 'ಗೌಡಗಾಂವ ಶಿಬಿರವು' ಒಂದು. ಈ ಶಿಬಿರಗಳು ನಿಜಾಮರಾಜ್ಯದಿಂದ ಸ್ವಾತಂತ್ರ ಪಡೆಯಲು ಹುಟ್ಟಿಕೊಂಡಿದ್ದರಿಂದ ಚರಿತ್ರೆಯಲ್ಲಿ 'ಸ್ವಾತಂತ್ರ ಹೋರಾಟದ ಶಿಬಿರಗಳು' ಎಂದೇ ಕರೆಸಿಕೊಂಡಿದೆ.

ದುದನಿ, ಸ್ಟೇಷನ್‌ಗಾಣಗಾಪುರ, ಸೊಲ್ಲಾಪುರ, ಸಿಂದಗಿ, ವಾಗ್ಧರಿ, ಮಾದನಹಿಪ್ಪರಗಾ ಶಿಬಿರಗಳಿಗೆ ಸಮೀಪವಿದ್ದ ಗೌಡಗಾಂವ ಶಿಬಿರ ಎಲ್ಲ ಸುತ್ತಮುತ್ತಲಿನ ಶಿಬಿರಗಳೊಂದಿಗೆ ಸಂಬಂಧ ಇಟ್ಟುಕೊಂಡು ಅವುಗಳಿಂದ ಸಹಾಯ ಸಹಕಾರಗಳನ್ನು ಪಡೆಯುತ್ತಿತ್ತು. ಈ ರೀತಿಯಾಗಿ ಸ್ವಾತಂತ್ರ ಚಳುವಳಿಯಲ್ಲಿ ತನ್ನ ಕೊಡುಗೆಯನ್ನು ನೀಡಿದ ಈ ಭೂಮಿ ಇನ್ನೊಂದೆಡೆ ಸಾಧು, ಸಂತ, ಆಧ್ಯಾತ್ಮ ಜೀವಿಗಳನ್ನು ಈ ನಾಡಿಗೆ ನೀಡಿದೆ.

### ೧. ಜನನ-ಬಾಲ್ಯ

ಕಲ್ಯಾಣದ ಹೆಬ್ಬಾಗಿಲೆನಿಸಿದ ಕಲಬುರ್ಗಿ ಜಿಲ್ಲೆ. ಅನೇಕ ಶರಣರ, ಸಂತರ, ದಾಸರ, ತತ್ವಪದಕಾರರ, ಅನುಭಾವಿಗಳ ತವರೂ ನೆಲೆಯಾಗಿರುವಂತೆ; ಕಲಬುರ್ಗಿ ಜಿಲ್ಲೆಯ ಅಫಜಲ್‌ಪುರ ತಾಲೂಕಿನ ಗಡಿ ಗ್ರಾಮ

ಗೌಡಗಾಂವದಲ್ಲಿ ಶರಣಯ್ಯ ಮತ್ತು ಬಸಲಿಂಗಮ್ಮನವರ ಪುಣ್ಯಗರ್ಭದಲ್ಲಿ ಕ್ರಿ.ಶ.೧೮೯೧ರಲ್ಲಿ ಮೂರನೇ ಮಗನಾಗಿ ಮುರುಘೇಂದ್ರಸ್ವಾಮಿಗಳು ಜನಿಸುತ್ತಾರೆ. ಮುರುಘೇಂದ್ರಸ್ವಾಮಿಯ ಹಿರಿಯ ಅಣ್ಣ ಕರಿಘೂಳೇಶ್ವರ ಮತ್ತು ಮಧ್ಯದವರು ರಾಮಲಿಂಗ.

ಶರಣಯ್ಯನವರು ಕಡುಬಡತನದಲ್ಲಿಯೇ ಜೀವನ ನಡೆಸುತ್ತಿದ್ದು ಜೀವನದ ನಿರ್ವಹಣೆ ಕಷ್ಟವಾದಾಗ ಊರ ಗೌಡನಿಂದ ಹಣ ಸಾಲ ಪಡೆದು ಸಂಸಾರವನ್ನು ನಡೆಸುತ್ತಿದ್ದರು. ಹೀಗೆ ಕುಟುಂಬದ ನಿರ್ವಹಣೆಗಾಗಿ ಊರ ಗೌಡನಿಂದ ಇಪ್ಪತ್ತೈದು ರೂಪಾಯಿಗಳ ಸಾಲ ಮರಳಿ ತೀರಿಸಲಾಗದೆ, ಗೌಡನಿಂದ ೪ ವರ್ಷಗಳ ಕಾಲ ತೆಗಳಿಸಿಕೊಂಡು, ಗೌಡರು ತಮ್ಮ ಹಣ ಮರಳಿ ಪಡೆಯುವುದಕ್ಕಾಗಿ ಆಳು ಹಚ್ಚಿ ವಸೂಲಿಗೆ ನಿಂತಾಗ ಶರಣಯ್ಯನವರು ನಡುರಾತ್ರಿಯಲ್ಲಿ ನಲ್ಲೆಯನ್ನು ಬಿಟ್ಟು ಹೋದ ಪ್ರಿಯತಮನಂತೆ ರಾತ್ರೋ ರಾತ್ರಿ ಹೆಂಡತಿ ಮಕ್ಕಳ ಜೊತೆಗೆ ಗೌಡಗಾಂವ ಗ್ರಾಮದಿಂದ ಬಿಡುಗಡೆಗೊಂಡು ಅಲೆದಾಡುತ್ತಾ, ಆ ಗ್ರಾಮದ ಜನರ ಕಣ್ಣಿಗೆ ಬೀಳದಂತೆ ರಾಯಚೂರು ಪಟ್ಟಣಕ್ಕೆ ಬಂದು ತಲುಪುತ್ತಾರೆ. ಶರಣರ, ದಾಸರ ಸಾಂಸ್ಕೃತಿಕ ಭಕ್ತಿ ಸಮನ್ವಯತೆಯಿಂದ ಕೂಡಿದ ಈ ಊರಲ್ಲಿ ಜೀವಿಸುವುದು ಶರಣಯ್ಯನವರಿಗೆ ಕಷ್ಟವಾಗಲಿಲ್ಲ. ಆ ಸಂದರ್ಭದಲ್ಲಿ ಮುರುಘೇಂದ್ರರು ಚಿಕ್ಕ ಬಾಲಕ, ಜಗತ್ತು ಅರಿಯದ ಹಸುಳೆ.

### ೨. ರಾಯಚೂರಿನಲ್ಲಿ ವಾಸ್ತವ್ಯ

ಶರಣಯ್ಯನವರು ಕುಟುಂಬದೊಡನೆ ರಾಯಚೂರಿಗೆ ಬಂದಾಗ ಹಿರಿಯಮಗ ಕರಿಘೂಳೇಶ್ವರ ಹದಿನಾರು ವರ್ಷದವನು, ಹೊಟ್ಟೆಪಾಡಿಗಾಗಿ ರಾಯಚೂರು ಅನುಕೂಲವಾಗಿತ್ತು. ಶರಣಯ್ಯನವರಿಗೆ ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ಸದಾ ಚಿಂತೆ, ಮುಂದೆ ಒಂದು ದಿನ ತಮ್ಮ ಬಡತನ ಸುಧಾರಿಸಬಹುದೆಂಬ ನಂಬಿಕೆಯ ಮೇಲೆ ಕಾಲ ಕಳೆಯುತ್ತಿದ್ದರು. ಸದಾ ಚಿಂತೆಯಲ್ಲಿಯೇ ಮುಳುಗಿದ ತಂದೆಯನ್ನು ನೋಡಿದ ಮಕ್ಕಳು ತಂದೆಯ ಚಿಂತೆಯನ್ನು ಕಡಿಮೆ ಮಾಡಬೇಕೆಂದು ಯೋಚಿಸತೊಡಗಿದರು. ಜೀವನದಲ್ಲಿ ನೊಂದುಕೊಂಡ ಶರಣಯ್ಯನವರಿಗೆ ಜೀವನ ಎಂಬುದೆ ಜಿಗುಪ್ಸೆ. ಈ ಭವ ಬಂಧನದ ಬದುಕಿನಿಂದ ಮುಕ್ತಿ ಪಡೆಯಲು ಯಾವಾಗಲೂ ತುದಿಗಾಲ ಮೇಲೆಯೇ ನಿಂತಿರುತ್ತಿದ್ದರು. ದಿನವು ಮುಳ್ಳಿನ ಹಾಸಿಗೆಯ ಮೇಲೆ ನಡೆಯುವವರಿಗೆ ಜೀವನದಲ್ಲಿನ ಕಷ್ಟ ದೊಡ್ಡದೆನಿಸದಿದ್ದರೂ ತಮ್ಮಿಂದ ಮಕ್ಕಳಿಗೆ ಒಳ್ಳೆಯದೇನು ಮಾಡಲು ಆಗುತ್ತಿಲ್ಲ ಎಂಬುದು ಅವರ ಪರಿತಾಪವಾಗಿತ್ತು.

ತಂದೆಯ ಮನೋಸ್ಥಿತಿಯನ್ನರಿತ ಮಕ್ಕಳು ತಮ್ಮಿಂದ ಈ ತರಹ ಆಗುತ್ತಿದೆ ಎಂದು, ತಂದೆಗೆ ಸಹಾಯ ಮಾಡಲು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಕೆಲಸಕ್ಕೆ ಸೇರಬೇಕೆಂದು ತಮ್ಮ ತಮ್ಮಲ್ಲಿಯೇ ನಿರ್ಧರಿಸಿಕೊಂಡು ರಾಯಚೂರಿನಲ್ಲಿ ಕೆಲಸ ಹುಡುಕಲು ಪ್ರಾರಂಭಿಸುತ್ತಾರೆ. ಆಟೋಟಗಳಲ್ಲಿ ಕಾಲ

ಕಳೆಯುವ ಇಳಿ ವಯಸ್ಸಿನಲ್ಲಿ, ಕೆಲಸಕ್ಕೆ ಸೇರಬೇಕೆಂಬುದು ಯಾರು ಅವರಿಗೆ ಹೇಳದಿದ್ದರೂ ತಮ್ಮ ಕುಟುಂಬದ ಅನಿವಾರ್ಯತೆಗಾಗಿ ಕಾಯಕ ಮಾರ್ಗದಲ್ಲಿ ನಡೆಯಲು ನಿರ್ಧರಿಸುತ್ತಾರೆ.

**೩. ಹೆತ್ತವರಿಗೆ ಭಾರವಾಗದೆ ಬದುಕಿದರು**

ಚಿಕ್ಕ ವಯಸ್ಸಿನಲ್ಲಿಯೇ ತಮ್ಮೆಲ್ಲ ಇಷ್ಟಗಳನ್ನು ಬದಿಗೊತ್ತಿ ಸಹೋದರರೆಲ್ಲಾ ದುಡಿಯಲು ತೊಡಗುತ್ತಾರೆ. ಹಿರಿಯನಾದ ಕರಿಘೂಳೇಶ್ವರ ಕೆಲಸಕ್ಕಾಗಿ ರಾಯಚೂರಿನ ಬೀದಿ ಬೀದಿ ಅಲೆಯುತ್ತಿದ್ದಾಗ ಕೆಲಸವೇ ಇವರನ್ನು ಹುಡುಕಿಕೊಂಡು ಬರುತ್ತದೆ. ಅಂಗಡಿಯೊಂದರಲ್ಲಿ ಲೆಕ್ಕ ಬರೆಯುವವನು ತನ್ನ ಯಜಮಾನನಿಗೆ ದಿನವು ಲೆಕ್ಕದಲ್ಲಿ ಮೋಸ ಮಾಡಿ ತನ್ನ ಜೇಬನ್ನು ತುಂಬಿಸಿಕೊಳ್ಳುತ್ತಿದ್ದ, ಇದನ್ನು ಗಮನಿಸಿದ ಕರಿಘೂಳೇಶ್ವರ ಯಜಮಾನನಿಗಾಗುತ್ತಿದ್ದ ಮೋಸವನ್ನು ಲೆಕ್ಕಿಗನ ಅಂಜಿಕೆ ಇಲ್ಲದೇ ಯಜಮಾನನಿಗೆ ತಿಳಿಸಿ ಕೈ ಲೆಕ್ಕವನ್ನು ಬರೆಯುತ್ತಿದ್ದವನಿಗೆ ಜೇಲಿಗೆ ಹಾಕಿಸಿ ಆ ಸ್ಥಾನದಲ್ಲಿ ಲೆಕ್ಕಿಗನೆಂದು ನಿಯುಕ್ತಿಯಾಗಿ ಅಂದಿನಿಂದಲೇ ಕೆಲಸ ಪ್ರಾರಂಭ ಮಾಡುತ್ತಾನೆ. ತನ್ನ ಸುತ್ತಮುತ್ತಲಿನಲ್ಲಿ ನಡೆಯುವ ಅನ್ಯಾಯಗಳಿಗೆ ಚಿಕ್ಕ ವಯಸ್ಸಿನಲ್ಲಿಯೇ ವಿರೋಧಿಸುವ ಗುಣ ಬೆಳೆಸಿಕೊಂಡ ಕರಿಘೂಳೇಶ್ವರ ಯಜಮಾನನ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿ ತಿಂಗಳಿಗೆ ಐವತ್ತು ರೂಪಾಯಿ ಸಂಬಳ ಪಡೆಯುತ್ತಾನೆ.

ಹಿರಿಯಣ್ಣನ ಆದರ್ಶದ ನೆರಳನ್ನು ಅನುಸರಿಸಿದ ಎರಡನೆಯವನಾದ ರಾಮಲಿಂಗನು ಕೆಲಸ ಹುಡುಕಲು ಪ್ರಾರಂಭಿಸುತ್ತಾನೆ. ಅಂದಿನ ದಿನಗಳಲ್ಲಿ ರಾಯಚೂರು ಹತ್ತಿ ಬೆಳೆಯನ್ನು ಪ್ರಮುಖ ವಾಣಿಜ್ಯ ಬೆಳೆಯನ್ನಾಗಿ ಬೆಳೆಯುತ್ತಿತ್ತು. ದೇಶದಲ್ಲಿಯೇ ಹತ್ತಿ ಬೆಳೆಗೆ ಹೆಸರುವಾಸಿಯಾಗಿತ್ತು. ಹತ್ತಿ ಬೆಳೆ ಹೆಚ್ಚಾದ್ದರಿಂದ ಅದಕ್ಕೆ ತಕ್ಕಂತೆ ಅನೇಕ ಬಟ್ಟೆಯ ಗಿರಣಿಗಳು ಅಲ್ಲಿ ಸ್ಥಾಪಿಸಲ್ಪಟ್ಟಿದ್ದವು. ಇದರಿಂದ ಉದ್ಯೋಗ ಅರಸಿ ಬಂದವರಿಗೆ ಅವರ ಸಾಮರ್ಥ್ಯಕ್ಕೆ ತಕ್ಕಂತೆ ಇಲ್ಲಿ ಕೆಲಸಗಳು ಸಿಗುತ್ತಿದ್ದವು. ಆದ್ದರಿಂದ ರಾಮಲಿಂಗನಿಗೂ ಕೆಲಸ ಸಿಗುವುದೇನು ಕಷ್ಟವಾಗಿರಲಿಲ್ಲ. ಹಾಗಾಗಿ ಆತನಿಗೆ ಜವಳಿ ಅಂಗಡಿಯೊಂದರಲ್ಲಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳದೊಂದಿಗೆ ವರ್ಷಕ್ಕೆ ಎರಡು ಜೊತೆ ಬಟ್ಟೆ ಉಚಿತವಾಗಿ ದೊರಕುವ ಕೆಲಸ ಸಿಕ್ಕಿತು.

ಹಿರಿಯ ಇಬ್ಬರು ಸಹೋದರರು ದುಡಿದು ಮನೆಗೆ ಸಂಬಳ ತರುವುದನ್ನು ಕಂಡು ಮುರುಘೇಂದ್ರಸ್ವಾಮಿಗಳು ಕಿರಾಣಿ ಅಂಗಡಿಯೊಂದರಲ್ಲಿ ಅಕ್ಕಿ ಅಳೆಯಲು ನಿಂತು ತಿಂಗಳಿಗೆ ಮೂವತ್ತು ರೂಪಾಯಿಗಳನ್ನು ಸಂಪಾದಿಸಿ ಹಿರಿಯರ ಹಾಗೇ ತಾವು ದುಡಿಯಲು ನಿಂತರು. ಹೀಗೆ ಕಾಯಕದಲ್ಲಿ ನಿಂತ ಮುರುಘೇಂದ್ರರ ವಯಸ್ಸು ಕೇವಲ ಹನ್ನೆರಡು ವರ್ಷ. ಮೂವರು ಸಹೋದರರು ದುಡಿಯಲು ನಿಂತಿದ್ದರಿಂದ ಅವರ ಕುಟುಂಬದ ಬಡತನ ಹೊಟ್ಟೆ ತುಂಬುವ ಮಟ್ಟಕ್ಕೆ ಬಂದಿತು. ಚಿಕ್ಕ ವಯಸ್ಸಿನಲ್ಲಿ ಕಾಯಕಕ್ಕೆ ಮಹತ್ವ ಕೊಟ್ಟಿದ್ದರಿಂದ, ಬಾಲಕರಿಗೆ ಶಿಕ್ಷಣ ದೊರೆಯಲಿಲ್ಲ. ಇದರಿಂದ ಶರಣಯ್ಯನವರು

ಮಕ್ಕಳು ಸಂಪಾದಿಸಿ ಕೈ ತುಂಬ ಹಣ ತಂದು ಕೊಟ್ಟರೂ, ಸಂತೋಷವಾಗಿರದೇ ಮನದಲ್ಲಿ ಮಮತೆ, ಕಣ್ಣಲ್ಲಿ ನೀರು ಹೀಗೆ ಮಕ್ಕಳ ಚಿಂತೆಯಲ್ಲಿಯೇ ದಿನಗಳನ್ನು ದೂಡುತ್ತಾರೆ.

ಶರಣಯ್ಯನವರು ಮೂವರು ಮಕ್ಕಳು ದುಡಿದು ತಂದ ಹಣದಿಂದ ಜೀವನ ಕಳೆಯುತೊಡಗಿದರು. ಶರಣಯ್ಯ ಮತ್ತು ಅವರ ಪತ್ನಿ, ಮಕ್ಕಳು ದುಡಿಯಲು ಪ್ರಾರಂಭಿಸಿದ ದಿನದಿಂದ ಕೆಲಸದಲ್ಲಿ ಬಿಡುವು ಮಾಡಿಕೊಂಡು ಧಾರ್ಮಿಕ ಜೀವನದ ಕಡೆ ತಮ್ಮ ಒಲವು ತೋರಿಸತೊಡಗಿದರು. ಮಕ್ಕಳು ಕೆಲಸಕ್ಕೆ ಹೋದಾಗ ದಂಪತಿಗಳಿಬ್ಬರು ದೇವರ ಪೂಜೆ, ಉತ್ಸವ, ಭಜನೆ ಮುಂತಾದ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಇದರಿಂದ ಅವರಿಗೆ ಶಿವಶರಣರ, ಆಧ್ಯಾತ್ಮ ಜೀವಿಗಳ, ಪವಾಡ ಪುರುಷರ ದರ್ಶನಾರ್ಶೀವಾದ ಲಭಿಸಿ ಶಂಕರಾರಾಧ್ಯ ಎಂಬ ಗುರುವಿನ ಪರಿಚಯವಾಗಿ ಆ ಪರಿಚಯ ಅವರ ಮಕ್ಕಳ ಜೀವನಕ್ಕೆ ದಾರಿ ದೀಪವಾಗುತ್ತದೆ.

## ೪. ಜಂಗಮತ್ವದ ಪರಿಪಾಲನೆ

ಶಂಕರಾರಾಧ್ಯ ಗುರುಗಳಿಂದ ಶರಣಯ್ಯ ಮತ್ತು ಬಸಲಿಂಗಮ್ಮನವರು ವೀರಶೈವ, ಲಿಂಗವಂತ, ಜಂಗಮರೆಂದರೇ ಯಾರು ಎಂಬುದನ್ನು ತಿಳಿದುಕೊಳ್ಳುತ್ತಾರೆ. `ಲಿಂಗಭಕ್ತ' `ಶಿವಭಕ್ತ' `ಶಿವ' ಇಲ್ಲವೆ `ಶಿವಶರಣ' ಎಂಬ ಪರ್ಯಾಯ ಹೆಸರುಗಳು ಇದಕ್ಕಿವೆ. ಶಿವಭಕ್ತರಿಗೆ ನಿಂದೆ ಮಾಡುವವರನ್ನು ವೀರನಾದವನು ಶೂರತನದಿಂದ ತಡೆಯುವುದೇ 'ವೀರಶೈವ' ಎಂಬ ಪದ ನಿಷ್ಪತ್ತಿಗೆ ಕಾರಣವೆಂಬ ಉಲ್ಲೇಖವು ವಚನಕಾರರಿಂದ ಲಭ್ಯವಾಗುತ್ತದೆ.

"ವೀರ ಬತ್ರಿ ಭಕ್ತನೆಂದು ಹೊಗಳಿಕೊಂಬಲ್ಲಿ ಹೇಳಿರಯ್ಯಾ
ವೀರನಾದರೆ ವೈರಿಗಳು ಮೆಚ್ಚಬೇಕು
ಬತ್ರಿಯಾದರೆ ಅಂಗನೆಯರು ಮೆಚ್ಚಬೇಕು
ಭಕ್ತನಾದರೆ ಜಂಗಮ ಮೆಚ್ಚಬೇಕು
ಈ ನುಡಿಯೊಳಗೆ ತನ್ನ ಬಗೆಯಿರೆ
ಬೇಡಿದ ಪದವೀಯ ನೀವೆ ಕೂಡಲ ಸಂಗಮದೇವ"[೧]

ಎಂಬ ಬಸವಣ್ಣನವರ ಈ ವಚನ ವೀರಶೈವ ಪದವನ್ನು ಪ್ರತಿಪಾದಿಸುತ್ತದೆ. ಲಿಂಗಾಯತ ಧರ್ಮದ ಒಳ ಪಂಗಡದಲ್ಲಿ ಬರುವ ಜಂಗಮ ಜಾತಿಗೆ ಲಿಂಗಾಯತ ಧರ್ಮ ಹೆಚ್ಚಿನ ಸ್ಥಾನಮಾನಗಳನ್ನು ಕೊಟ್ಟಿದೆ. ಜಂಗಮರು ಪೂಜಾರ್ಹರೆಂದು ಲಿಂಗಾಯತ ಧರ್ಮ ಹೇಳುತ್ತದೆ. ಜಂಗಮರಲ್ಲಿ ನಾಲ್ಕು ಒಳ ಗುಂಪುಗಳು ಕಂಡು ಬರುತ್ತವೆ.

೧. ಹಿರೇಮಠ

೨. ಗಣಕುಮಾರ

೩. ಗಣಾಚಾರ

೪. ಮಠಪತಿ

ಈ ಒಳ ಪಂಗಡಗಳು ತಮ್ಮದೇ ಆದ ಕಾಯಕವನ್ನು ನಿರ್ವಹಿಸುತ್ತವೆ. ಒಬ್ಬರ ಕಾಯಕ ಇನ್ನೊಬ್ಬರು ಮಾಡಲು ಇಲ್ಲಿ ಅವಕಾಶವಿಲ್ಲ. ಪ್ರಮುಖವಾಗಿ "ಹಿರೇಮಠದವರು ಧಾರ್ಮಿಕ ಕಾರ್ಯಗಳ ಅಧಿಪತ್ಯ ವಹಿಸಿದರೆ ಅವರಿಗೆ ಸಹಾಯಕರಾಗಿ, ಕ್ರಮವಾಗಿ ಗಣಕುಮಾರ, ಗಣಾಚಾರ, ಮತ್ತು ಮಠಪತಿಗಳು ತಮ್ಮ ಕಾರ್ಯಗಳನ್ನು ನೆರವೇರಿಸುತ್ತಾರೆ. ಹಿರೇಮಠದವರ ನಿರ್ದೇಶನದ ಮೇರೆಗೆ ಗಣಕುಮಾರರು ಧಾರ್ಮಿಕ ಕಾರ್ಯ ಕೈಗೊಂಡರೆ, ಗಣಾಚಾರಿಗಳು ವಿವಾಹ ಜರಗಿಸುತ್ತಾರೆ. ನಾಲ್ಕನೆಯ ವರ್ಗಕ್ಕೆ ಸೇರಿದ ಮಠಪತಿಗಳು ಮೇಲಿನ ಮೂವರಿಗೂ ಅವರ ಕಾರ್ಯಗಳಲ್ಲಿ ಸಹಾಯ ಮಾಡಬೇಕಾಗುತ್ತದೆ".[೨]

ಈ ಮೇಲಿನ ಗುಂಪುಗಳಲ್ಲಿ ಹಿರೇಮಠದವರು ವಿವಾಹವಾಗಬಹುದು. ವಿವಾಹವಾದರೆ ಇವರು ಮಠಗಳಲ್ಲಿ ಪಟ್ಟಕ್ಕೆ ಕೂಡಲು ಬರುವುದಿಲ್ಲ. ಹಾಗೇನಾದರೂ ಪಟ್ಟಕ್ಕೆ ಕೂಡಿಸಬೇಕಾದರೆ ಬಾಲ್ಯದಲ್ಲಿಯೇ ಸನ್ಯಾಸತ್ವವನ್ನು ಸ್ವೀಕರಿಸಲು ಸೂಚಿಸಲಾಗುತ್ತದೆ. ಹೀಗೆ ಸನ್ಯಾಸತ್ವವನ್ನು ಸ್ವೀಕರಿಸಿದ ಬಾಲಕನಿಗೆ 'ಮರಿ' ಎಂದು ಸಂಬೋಧಿಸಿ ಅವನಿಗೆ ವಿಶೇಷವಾಗಿ ಧರ್ಮಶಾಸ್ತ್ರವನ್ನು ಬೋಧಿಸಲಾಗುತ್ತದೆ. 'ಮರಿ' ಎಂದು ಕರೆದರೆ ಆತ ಮಠದ ಉತ್ತರಾಧಿಕಾರಿ ಎಂದೇ ಅರ್ಥ. ಹೀಗೆ ಮಠದ ಉತ್ತರಾಧಿಕಾರಿ ಎಂದು ದೃಢಪಡಿಸಿದ ಮರಿಗೆ 'ಅಯ್ಯಾಚಾರ' ಎಂಬ ಜಂಗಮ ಧರ್ಮದ ಒಂದು ಸಂಸ್ಕಾರವನ್ನು ಮಾಡುತ್ತಾರೆ. (ಕೇವಲ ಮರಿಗಳಿಗೆ ಮಾತ್ರವಲ್ಲ ಎಲ್ಲ ಜಂಗಮ ಗಂಡು ಮಕ್ಕಳಿಗೂ ಅಯ್ಯಾಚಾರ ಮಾಡುತ್ತಾರೆ.) ಹಾಗೇನಾದರೂ ಅಯ್ಯಾಚಾರ ಮಾಡದಿದ್ದರೆ ಆ ಬಾಲಕ ಮುಂದೆ ಲಿಂಗಧಾರಣೆ, ಮಂತ್ರ ಪಠಣ, ಜನನ ಕಾರ್ಯ, ಮದುವೆ ಕಾರ್ಯಗಳನ್ನು ಜಂಗಮನಾಗಿ ನೆರವೇರಿಸಲು ಬರುವುದಿಲ್ಲ. ಅಂತೆಯೇ ಬಾಲಕ ಎಂಟು ವರ್ಷ ಪೂರ್ತಿಗೊಳಿಸಿದ ಮೇಲೆ ಈ ಅಯ್ಯಾಚಾರ ಧರ್ಮಾನುಸಾರ ಮಾಡಲಾಗುತ್ತದೆ.

ಈ ರೀತಿಯಾಗಿ ಜಂಗಮರಲ್ಲಿ ಅಯ್ಯಾಚಾರಕ್ಕೆ ಮಹತ್ವವಿರುವುದರಿಂದ ಮುರುಘೇಂದ್ರ ಸ್ವಾಮಿಗಳ ತಂದೆ ತಾಯಿಗಳು ಬಾಲಕರಿಗೆ ಎಂಟು ವರ್ಷ ಮುಗಿದ ಬಳಿಕ ಅಯ್ಯಾಚಾರ ಮಾಡಬೇಕೆಂದು ನಿರ್ಧರಿಸುತ್ತಾರೆ. ಶರಣಯ್ಯ ಮತ್ತು ಬಸಲಿಂಗಮ್ಮ ದಂಪತಿಗಳೀರ್ವರು ಶಂಕರಾರಾಧ್ಯ ಗುರುಗಳ ಬಳಿ ಹೋಗಿ ತಮ್ಮ ಮಕ್ಕಳಿಗೆ ಅಯ್ಯಾಚಾರ ಮಾಡಿಸುವಂತೆ ವಿನಂತಿಸಿಕೊಳ್ಳುತ್ತಾರೆ. ಗುರುಗಳು ಇವರ ಆಸೆಯಂತೆ ಮಕ್ಕಳಿಗೆ ಅಯ್ಯಾಚಾರ ಮಾಡಿಸಲು ಅಪ್ಪಣೆ ನೀಡುತ್ತಾರೆ. ಗುರುಗಳ ಅಪ್ಪಣೆ ಸಿಕ್ಕರೂ ದೈವದ ಅಪ್ಪಣೆ ಸಿಗಲಿಲ್ಲವೆಂಬಂತೆ ಪಾಲಕರಿಗೆ ತೀವ್ರ ಹಣದ ಸಮಸ್ಯೆ ಉಂಟಾಗಿ ಮತ್ತೆ ಗುರುಗಳ ಬಳಿಗೆ ಬಂದು ವಿಷಯ ತಿಳಿಸಿದಾಗ ಗುರುಗಳು ಈ

ವಿಘ್ನಕ್ಕೆ ಪರಿಹಾರ ಸೂಚಿಸುತ್ತಾರೆ. ರಾಯಚೂರಿನ ಆಗರ್ಭ ಶ್ರೀಮಂತರ ಮನೆಯ ಲಗ್ನದಲ್ಲಿ ಜಂಗಮರ ಮಕ್ಕಳಿಗೆ ಸಾಮೂಹಿಕ ಉಚಿತ ಅಯ್ಯಾಚಾರ ಕಾರ್ಯಕ್ರಮ ಏರ್ಪಟ್ಟಿರುತ್ತದೆ. ಬಡವ ಜಂಗಮರು ಈ ಕಾರ್ಯಕ್ರಮದಲ್ಲಿ ಭಾಗವಹಿಸುವಂತೆ ವಿನಂತಿಸಲಾಗಿರುತ್ತದೆ. ಈ ವಿಷಯ ತಿಳಿಸಿದ ಗುರುಗಳನ್ನು ವಂದಿಸಿ ಆ ಉಚಿತ ಸಾಮೂಹಿಕ ಅಯ್ಯಾಚಾರ ಕಾರ್ಯಕ್ರಮದಲ್ಲಿ ತಮ್ಮ ಮಕ್ಕಳಿಗೆ ಅಯ್ಯಾಚಾರ ಮಾಡಿಸಿ ಜಂಗಮ ತತ್ವವನ್ನು ಪಾಲಿಸುತ್ತಾರೆ.

## ೫. ಜನಪದ ಕಲಾವಿದನಾಗಿ ಮುರುಘೇಂದ್ರಸ್ವಾಮಿ

ರಾಮಲಿಂಗ ಮತ್ತು ಮುರುಘೇಂದ್ರಸ್ವಾಮಿಗಳು ಆಗಲೇ ಹಲವು ಜನಪದ ಕಲೆಗಳನ್ನು ಕರಗತ ಮಾಡಿಕೊಂಡಿದ್ದರು. ತಮ್ಮ ಜನಪದ ಕಲೆಗಳನ್ನು ಆಡಿ ತೋರಿಸಲು ಸಹೋದರರು ಊರು ಊರು ಅಲೆದಾಡುವುದನ್ನು ರೂಢಿ ಮಾಡಿಕೊಂಡರು. ಹೀಗೆ ಊರು ಊರು ಅಲೆಯುತ್ತಾ ಪಕ್ಕದ ಆಂಧ್ರಪ್ರದೇಶಕ್ಕೆ ಹೋಗಿ ತೆಲಂಗಾಣದಲ್ಲಿ ದಪ್ಪಿನ ಆಟ, ರಾಧಾಕೃಷ್ಣನ ಆಟ ಆಡಲು ಮೇಲಿಂದ ಮೇಲೆ ಹೋಗುತ್ತಿದ್ದರು. ಅಲ್ಲಿನ ಜನಪದರು ಇವರ ಆಟ ನೋಡಿ ಒಮ್ಮೊಮ್ಮೆ ಇವರನ್ನೇ ದೇವರೆಂದು ತಿಳಿದು ಕಣ್ಣಲ್ಲಿ ನೀರು ತಂದು, ಭಾವುಕರಾಗಿ ಕೈ ತುಂಬ ಹಣ ನೀಡುವುದರ ಜೊತೆಗೆ ಊರಿಗೆ ಊರೇ ಇವರು ಗ್ರಾಮದಲ್ಲಿ ಇರುವಷ್ಟು ದಿನ ಹೋಳಿಗೆ ಊಟ, ಕರಿಗಡುಬಿನ ಊಟ ಮಾಡಿಸುತ್ತಿದ್ದರು. ಸಹೋದರರಿಬ್ಬರು ಒಮ್ಮೆ ತೆಲಂಗಾಣಕ್ಕೆ ಹೋದರೆಂದರೆ ಆಗಿನ ಕಾಲದಲ್ಲಿಯೇ ಸುಮಾರು ನೂರು ರೂಪಾಯಿಗಳಿಗಿಂತಲೂ ಅಧಿಕ ಹಣ ಸಂಪಾದಿಸಿಕೊಂಡು ಹಿಂತಿರುಗುತ್ತಿದ್ದರು. ದಿನಕ್ಕೆ ಮೂರಾಣೆ ಕೂಲಿ ಇರುವಂತಹ ದಿನಮಾನದಲ್ಲಿ ನೂರು ರೂಪಾಯಿ ಗಳಿಸಿಕೊಂಡು ಬರುತ್ತಿದ್ದರೆಂದರೆ ಇವರು ಪ್ರದರ್ಶಿಸುವ ಜನಪದ ಕಲೆಗಳಿಗೆ ಬೆಲೆ ಎಷ್ಟಿತ್ತೆಂಬುದು ಅರ್ಥವಾಗುತ್ತದೆ. ಬರಿ ಕಲೆಯನ್ನು ಪ್ರದರ್ಶನ ಮಾಡಿ ಹಣ ಗಳಿಸಬೇಕೆಂಬ ಉದ್ದೇಶ ಇವರಲ್ಲಿರಲಿಲ್ಲ. ಆ ಭಗವಂತನೆ ಇವರನ್ನು ಲೋಕೋದ್ಧಾರ ಮಾಡಲು ಕಳುಹಿಸಿದ್ದಾನೆಂಬಂತೆ ಸಕಲ ಜೀವಾತ್ಮರ ಚಿಂತೆ ಬಾಲ್ಯದಿಂದಲೇ ಇವರಲ್ಲಿ ಮೂಡಿತ್ತೆಂದು ಹೇಳಬಹುದು.

ಬಾಲ್ಯದಲ್ಲಿಯೇ ಕಾಯಕದಲ್ಲಿ ನಿರತರಾದ ಸಹೋದರರು, ಧರ್ಮವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ನಡೆಯ ತೊಡಗಿದರು. ಶಂಕರಾರಾಧ್ಯರು ಹಾಕಿ ಕೊಟ್ಟ ಮಾರ್ಗದಲ್ಲಿಯೇ ತಮ್ಮ ಜೀವನ ಬೆಳೆಸಿಕೊಳ್ಳಲು ಮಗ್ನರಾದರು.

ರಾಮಲಿಂಗರು ಮತ್ತು ಮುರುಘೇಂದ್ರರು ಹೀಗೆ ಊರೂರು ಅಲೆಯುವುದನ್ನು ಕಂಡು ಹಿರಿಯ ಸಹೋದರ ಕರಿಘೂಳೇಶ್ವರ ಚಿಂತಿಸಲು ಪ್ರಾರಂಭಿಸುತ್ತಾರೆ. ಹೀಗೆಯೇ ಇವರನ್ನು ಬಿಟ್ಟರೆ ಮನೆ, ಊರು, ತಂದೆ-ತಾಯಿ, ನನ್ನ ಮತ್ತು ಗುರುಗಳನ್ನು ಬಿಟ್ಟು ಅಡ್ಡ ದಾರಿ ಹಿಡಿದು ಅಲೆಮಾರಿಗಳಾಗುತ್ತಾರೆಂದು, ಇಬ್ಬರು ಸಹೋದರರಿಗೆ ಈಗಲಾದರು ಶಿಕ್ಷಣ, ದೀಕ್ಷೆ ಕೊಡಬೇಕೆಂದು ಆಲೋಚಿಸಿ ಗುರು ಶಂಕರಾರಾಧ್ಯರ ಬಳಿ ಬಂದು ತಮ್ಮ ಚಿಂತೆಯನ್ನು ವ್ಯಕ್ತಪಡಿಸುತ್ತಾರೆ.

## ೬. ಅಣ್ಣನಿಂದ ಗುರುದೀಕ್ಷೆ

ದೈವತ್ವವನ್ನು ಬಲ್ಲ ಶಂಕರಾರಾಧ್ಯರು ಕರಿಘೂಳೇಶ್ವರನ ಚಿಂತೆ ಮೊದಲೆ ತಿಳಿದವರಾಗಿದ್ದು, ಶಂಕರಾರಾಧ್ಯರ ಗುರುಗಳಾದ ಫೊಲ್‌ಚಿಂತೆ ಬಂಡೆಗುರುಗಳು ಒಮ್ಮೆ ಶಂಕರಾರಾಧ್ಯರಿಗೆ ಈ ರೀತಿ ಹೇಳಿದ್ದರು. 'ನಿನ್ನ ಬಳಿ ಮುಂದೆ ಮೂವರು ಮಕ್ಕಳು ದೀಕ್ಷೆಗಾಗಿ ಬರುತ್ತಾರೆ. ಅವರೇನು ಸಾಮಾನ್ಯ ಮಕ್ಕಳಲ್ಲ. ಭವಿಷ್ಯದಲ್ಲಿ ಈ ಮಕ್ಕಳು ಪ್ರಕಾಶಮಾನವಾಗಿ ರತ್ನದಂತೆ ಹೊಳೆಯುತ್ತಾರೆ. ನೀನು ಆ ರತ್ನಗಳ ಮೇಲಿನ ಧೂಳನ್ನು ಮಾತ್ರ ಸ್ವಚ್ಛಗೊಳಿಸು, ನೆಪಕೆಂಬಂತೆ ನಿನ್ನನೂ ಇಲ್ಲಿ ದೇವರು ಈ ಕಾರ್ಯಕ್ಕೆ ನಿಯುಕ್ತಿಗೊಳಿಸಿದ್ದಾನೆ. ಇದರಿಂದಲೇ ನಿನಗೆ ಮೋಕ್ಷ ಸಿಗುವುದು.'

ಫೊಲ್‌ಚಿಂತೆ ಗುರುಗಳ ಆಜ್ಞೆಯಂತೆ ತ್ರಿಮೂರ್ತಿಗಳಿಗೆ ಜ್ಞಾನ ದೀಕ್ಷೆ ಕೊಡಲು ಮುಂದಾಗಿ ಅವರ ಹಸ್ತವನ್ನು ನೋಡುತ್ತಾನೆ. ಬಾಲಕರ ಹಸ್ತವನ್ನು ನೋಡಿ ಶಂಕರಾರಾಧ್ಯರು ಹೆದರುತ್ತಾರೆ. ಒಬ್ಬ ಆಧ್ಯಾತ್ಮ ಪುರುಷ, ಯೋಗಿ, ಸಿದ್ಧಿಯನ್ನು ಪಡೆದವರೇ ಹೆದರಬೇಕೆಂದರೇ..ಸಹೋದರರ ಹಸ್ತಗಳಲ್ಲಿನ ಗೆರೆಗಳು ಅರ್ಥ 'ಮುಂದಿನ ಜೀವನದಲ್ಲಿ ಮೂವರು ಸಹೋದರರು ಒಂದು ಕಡೆ ಕೂಡಿದ್ದರೆ, ಘನಘೋರ ಅಹಿತಕರ ಘಟನೆಗಳು ಸಂಭವಿಸುತ್ತವೆ' ಎಂಬ ಎಚ್ಚರಿಕೆಯನ್ನು ಶಂಕರಾರಾಧ್ಯರು ತಿಳಿಸುತ್ತಾರೆ. ಮೂವರು ಸಹೋದರರು ಒಂದೇ ಕಡೆ ಇದ್ದು, ನಂತರದಲ್ಲಿ ಒಂದೇ ಕಡೆ ಕಲೆಯಬಾರದೆಂಬ ನಂಬಿಕೆ ಏನಿದೆಯೋ ಅದು ಈ ರೀತಿಯ ವೈಜ್ಞಾನಿಕ ಸತ್ಯವಿರಬಹುದೆಂಬ ಭಾವನೆ ನನ್ನದು. ಈ ಮೂವರಲ್ಲಿಯು ಆಧ್ಯಾತ್ಮದ ಜ್ಞಾನವಿರುವುದನ್ನು ಗಮನಿಸಿದ ಗುರುಗಳು ಒಂದೇ ಕಡೆ ವಾಸಿಸುವುದಕ್ಕಿಂತಲೂ ಬೇರೆ ಬೇರೆ ಕಡೆಗೆ ಹೋದರೆ ಆಧ್ಯಾತ್ಮದ ಅರಿವನ್ನು ಎಲ್ಲ ಕಡೇ ಬಿತ್ತಬಹುದೆಂಬ ತಿಳುವಳಿಕೆಯಿಂದ ಅವರು ಒಂದೇ ಕಡೆ ವಾಸ ಮಾಡಬಾರದೆಂದು ಹೇಳಿರಬೇಕು?.

ತಮ್ಮ ಕಾಲಜ್ಞಾನ ಬಲದಿಂದ ತಿಳಿದುಕೊಂಡ ಶಂಕರಾರಾಧ್ಯರು ಕರಿಘೂಳೇಶ್ವರರಿಗೆ ಎಲ್ಲ ವಿಷಯವನ್ನು ತಿಳಿಸಿ ಮುಂದೆ ಸಹೋದರರೆಲ್ಲರೂ ಒಂದು ಕಡೆ ನೆಲೆ ನಿಲ್ಲದೆ, ಒಂದು ಕಡೆ ಕೂಡದೆ ಇರಬೇಕೆಂದು ವಚನ ಪಡೆದುಕೊಂಡು ಅಂದಿನಿಂದಲೇ ಸಹೋದರರನ್ನು ಬೇರ್ಪಡಿಸುತ್ತಾರೆ. ಒಟ್ಟಿಗೆ ಮೂವರು ಸಹೋದರರಿಗೆ ದೀಕ್ಷೆ ಕೊಡುವ ಬದಲಾಗಿ ಹಿರಿಯ ಕರಿಘೂಳೇಶ್ವರರಿಗೆ ತಮ್ಮಲ್ಲಿದ್ದ ಎಲ್ಲ ಬ್ರಹ್ಮ ವಿದ್ಯೆಗಳನ್ನು ಧಾರೆ ಎರೆಯುತ್ತಾರೆ.

## ೭. ಗುರು ಪರಂಪರೆ



ಶಂಕರಾರಾಧ್ಯರಿಂದ ದೀಕ್ಷೆ ಪಡೆದ ಕರಿಘೂಳೇಶ್ವರರು ಗುರುಗಳಿಂದ ತಮಗೆ ಸಿದ್ಧವಾದ ಮೂರುನೂರರವತ್ತು (೩೬೦) ಶಾಸ್ತ್ರಗಳನ್ನು ತಮ್ಮ ಸಹೋದರರಿಗೆ ಬೋಧಿಸುತ್ತಾರೆ. ಮುಂದಿನ ಬದುಕನ್ನು ಮಾನವರ ಕಲ್ಯಾಣ, ಸಮಾಜದ ಉದ್ಧಾರಕ್ಕೆ ತೊಡಗುವಂತೆ ಸಹೋದರ ಶಿಷ್ಯರಿಗೆ ಆಜ್ಞಾಪಿಸಿ ಕೊನೆಯ ಬಾರಿ ಸಹೋದರರಿಬ್ಬರನ್ನು ಒಟ್ಟಿಗೆ ನೋಡಿ ದೇಶ ಸಂಚಾರಕ್ಕೆ ಕಳಿಸುತ್ತಾರೆ ಹೀಗೆ ಅಣ್ಣನಿಂದ ಆಜ್ಞೆಯನ್ನು ಪಡೆದು ದೇಶ ಸಂಚಾರಕ್ಕೆ ಹೋಗುವಾಗ ಅವರಿಗೆ ಭವದ ಮೇಲಿನ ಆಸೆ ಆಕಾಂಕ್ಷೆಗಳು ತ್ಯಜಿಸಲ್ಪಟ್ಟಿವು. ಸ್ವತಃ ತಂದೆ-ತಾಯಿಗಳು ವಿನಂತಿಸಿದರು ಅವರ ಪ್ರೀತಿ, ಮಮತೆಗೆ ಒಗೊಡದೆ ಜನ ಹಿತಕ್ಕಾಗಿ ತಮ್ಮೆಲ್ಲರನ್ನು ಬಿಟ್ಟು ಅಲ್ಲಿಂದ ಹೊರಟು ಹೋಗುತ್ತಾರೆ. ಹೀಗೆ ಲೋಕದ ಹಿತಕ್ಕಾಗಿ ಅಲೆದಾಡುತ್ತಾ ಹೊರಟ ಸಹೋದರರು ಇಡೀ ಹೈದರಾಬಾದ್-ಕರ್ನಾಟಕ ವ್ಯಾಪ್ತಿ ಪ್ರದೇಶವನ್ನೆಲ್ಲ, ಅದರಲ್ಲೂ ಕಲಬುರ್ಗಿ ಜಿಲ್ಲೆಯನ್ನು ಆಳವಾಗಿ ಕಂಡುಂಡು ಅನುಭವಿಸಿದರು.

### ೮. ವೃತ್ತಿನಿರತರಾಗಿ ದುಡಿದದ್ದು

ಕರಿಘೂಳೇಶ್ವರರಿಂದ ಜ್ಞಾನ ದೀಕ್ಷೆ ಪಡೆದ ನಂತರ ಮುರುಘೇಂದ್ರಸ್ವಾಮಿಗಳು ಲೋಕ ಸಂಚಾರ ಕೈಗೊಳ್ಳುತ್ತಾರೆ. ಆಧ್ಯಾತ್ಮ ಜೀವನ ಪ್ರವೇಶಿಸುವುದಕ್ಕೆ ಪೂರ್ವದಲ್ಲಿ ಮುರುಘೇಂದ್ರಸ್ವಾಮಿಗಳು ಅನೇಕ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಜನಪದ, ಕಲೆ, ಜನಪದ ವೇಷ, ಭೂಷಣ, ಜನಪದ ರಂಗಭೂಮಿಗಳಲ್ಲಿ ವಿಪರಿತ ಆಸಕ್ತಿ ಹೊಂದಿದ ಮುರುಘೇಂದ್ರಸ್ವಾಮಿ ಅಂತೆಯೇ 'ಜಡಚರ್ಲ್ ಕೊಟೇಶ್ವರರಾವ್' ಅವರ ನಾಟಕ ಕಂಪನಿಯಲ್ಲಿ ನಾಯಕ ನಟರಾಗಿ ದುಡಿಯುತ್ತಾರೆ. ಇವರು ನಾಯಕ ನಟರಾಗಿ ಪಾತ್ರ ನಿರ್ವಹಿಸುವಾಗ ಕಂಪನಿ ಹೆಸರುವಾಸಿಯಾಯಿತು. ಕಂಪನಿ ಹೆಚ್ಚು ಹೆಚ್ಚು ದುಡಿದು ಅತ್ಯಧಿಕ ಹಣ ಸಂಪಾದಿಸಿತು. ಇದರಿಂದ ಕಂಪನಿಯ ಮಾಲೀಕರಿಗೂ, ಮುರುಘೇಂದ್ರರಿಗೂ ಒಂದು ಅನೋನ್ಯ ಸಂಬಂಧ ಏರ್ಪಟ್ಟಿತು.

ಕಬೀರದಾಸ, ರಾಮಾಯಣ, ಮಹಾಭಾರತದ ನಾಟಕಗಳಲ್ಲಿ ಮುರುಘೇಂದ್ರರು ನಾಯಕ ನಟರಾಗಿ ನಟಿಸಿದರು. ಇದಿಷ್ಟೆ ಅಲ್ಲ ಯಾವುದೇ ರೀತಿಯ ನಾಟಕಗಳಿದ್ದರು, ತಮ್ಮ ಪ್ರತಿಭೆ ಹೊರ ಹಾಕುತ್ತಿದ್ದರು. ಇವರಿಗೆ ಸರಿಯಾಗಿ ಗುನ್ನಮ್ಮ ಎಂಬುವಳು ನಟಿಯಾಗಿ ಪಾತ್ರ ನಿರ್ವಹಿಸುತ್ತಿದ್ದಳು. ಇವರಿಬ್ಬರು ಪಾತ್ರ ನಿರ್ವಹಿಸುವುದರಿಂದ ಕಂಪನಿ ಲಾಭವನ್ನು, ಪ್ರಚಾರವನ್ನು ಪಡೆದುಕೊಂಡಿತು. ನಾಟಕ ಕಂಪನಿ ಬೇರೆ ಬೇರೆ ಊರುಗಳಲ್ಲಿ ಬಿಡಾರ ಹೂಡಿ ಅನೇಕ ಕಡೆಗಳಲ್ಲಿ ಯಶಸ್ವಿ ಪ್ರದರ್ಶನ ನಡೆಸಿತು. ಊರಿಂದ ಊರಿಗೆ ಕಂಪನಿ ಪ್ರದರ್ಶನ ನೀಡುತ್ತಾ ಒಮ್ಮೆ ಚಿತ್ತಾಪುರಕ್ಕೆ ಬಂದಿತು. ಅಲ್ಲಿಯು ನಾಟಕ ಕಂಪನಿ ಅಮೋಘ ಪ್ರದರ್ಶನಗಳನ್ನು ನೀಡಿ ಸುತ್ತಮುತ್ತಲಿನ ಅನೇಕ ಗ್ರಾಮಗಳಲ್ಲಿನ ಜನರ ಮನಸ್ಸನ್ನು ಗೆದ್ದು ಅವರ ಪ್ರೀತಿಗೆ ಪಾತ್ರವಾಯಿತು.

ಈ ಕಂಪನಿಯ ನಾಯಕರೆಂದೇ ಮುರುಘೇಂದ್ರಸ್ವಾಮಿಗಳು ಜನಪ್ರಿಯರಾದರು. ಇವರ ಖ್ಯಾತಿ ಇಡೀ ಪ್ರದೇಶದಲ್ಲೆಲ್ಲ ಹರಡಿತು. ಮುರುಘೇಂದ್ರಸ್ವಾಮಿಗಳು ದೇವರ ಪಾತ್ರದಲ್ಲಿ ಕಾಣಿಸಿಕೊಂಡರೆ ಜನರೆಲ್ಲರು ಇವರನ್ನು ಸಾಕ್ಷಾತ್ ದೇವರೆಂದೆ ತಿಳಿದು ಕಾಲಿಗೆ ಬೀಳುತ್ತಿದ್ದರು. ಜನರ ಭಾವನಾತ್ಮಕ ಸಂಬಂಧಗಳಿಗೆ ಹತ್ತಿರದವರಾಗಿದ್ದುದರಿಂದ ಈ 'ಕಂಪನಿಯೇ ಮುರುಘೇಂದ್ರ, ಮುರುಘೇಂದ್ರರೇ ಕಂಪನಿ' ಎನ್ನುವಷ್ಟರ ಮಟ್ಟಿಗೆ ಜನರ ಭಾವನೆ ನೆಲೆಯೂರಿತು.

ಮುರುಘೇಂದ್ರಸ್ವಾಮಿಗಳ ಜನಪ್ರಿಯತೆಯನ್ನರಿತ ಎಲೆರಾಜೋಳ ಗ್ರಾಮದ ಈರಣ್ಣ ಗೌಡರು ಹೇಗಾದರು ಮಾಡಿ ಇವರನ್ನು ತಮ್ಮ ಗ್ರಾಮದಲ್ಲಿ ನೆಲೆಸುವಂತೆ ಮಾಡಬೇಕೆಂದು ಗ್ರಾಮದ ಇತರ ಸದಸ್ಯರಾದ ಚಂದ್ರಶೆಟ್ಟಿ, ಬಜರಂಗ್‌ಸಿಂಗ್‌ಸಾವ್ಕಾರ, ಇವರೆಲ್ಲಾ ಕೂಡಿ ಮುರುಘೇಂದ್ರಸ್ವಾಮಿಗಳ ಬಳಿ ಬಂದು ಎಲೆರಾಜೋಳ ಗ್ರಾಮದಲ್ಲಿ ನೆಲೆಸಿ ಭಕ್ತ ಸಮೂಹಕ್ಕೆ ದಾರಿ ದೀಪವಾಗಬೇಕೆಂದು ವಿನಂತಿಸುತ್ತಾರೆ. ಮುರುಘೇಂದ್ರಸ್ವಾಮಿಗಳು ಅಣ್ಣನ ಅನುಮತಿಯ ಮೇರೆಗೆ ಎಲೆರಾಜೋಳ ಗ್ರಾಮದಲ್ಲಿ ನೆಲೆಸಲು ಒಪ್ಪಿಕೊಳ್ಳುತ್ತಾರೆ. ಊರೂರು ತಿರುಗಾಡಿ ಕಲೆ ಪ್ರದರ್ಶನ ಮಾಡುವುದನ್ನು ನಿಲ್ಲಿಸಿ ಭಕ್ತರ ಒಪ್ಪಿಗೆಯ ಮೇರೆಗೆ ಎಲೆರಾಜೋಳದಲ್ಲಿ ನೆಲೆಸಿ ಆಧ್ಯಾತ್ಮಿಕ ಜೀವನದ ಮೊದಲ ಹೆಜ್ಜೆ ಅಲ್ಲಿಡುತ್ತಾರೆ.

### ೯. ಎಲೆರಾಜೋಳ ಗ್ರಾಮ

ವರಕವಿ ಮುರುಘೇಂದ್ರಸ್ವಾಮಿಗಳು ನೆಲೆಸಿದ ಎಲೆರಾಜೋಳ ಗ್ರಾಮವು ಗುಲಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಕರ್ನಾಟಕಾಂಧ್ರ ಗಡಿಯ ಒಂದು ಸಣ್ಣ ಹಳ್ಳಿ. ಗುಲಬರ್ಗಾ ಕೊಡಂಗಲ್ ರಾಜ್ಯ ಹೆದ್ದಾರಿಯಿಂದ ೪ ಕಿ.ಮೀ. ದೂರದಲ್ಲಿದೆ. ಮುಧೋಳ ಸಮೀಪದ ಎಲೆರಾಜೋಳ ಗ್ರಾಮದಲ್ಲಿ ಅಗಸೆ ಬಾಗಿಲು ಮತ್ತು ಮುರುಘೇಂದ್ರರ ಗದ್ದುಗೆ ದೇವಸ್ಥಾನ ಬಿಟ್ಟರೆ ಇಲ್ಲಿ ಪ್ರೇಕ್ಷಣೀಯವಾದುದು ಮತ್ತೇನು ಕಾಣಸಿಗುವುದಿಲ್ಲ. ಎಲೆರಾಜೋಳ ಗ್ರಾಮವು ಉಳಿದೆಲ್ಲ ವಿಷಯಗಳಲ್ಲಿ ನಮ್ಮ ಇತರ ಗಡಿ ಗ್ರಾಮಗಳಂತೆ ಇರುವ ಒಂದು ಸಾಮಾನ್ಯ ಹಳ್ಳಿ. ಆದರೆ ನಾಡಿನ ಗಮನ ಈ ಸಣ್ಣ ಹಳ್ಳಿಯ ಕಡೆಗೆ ಹರಿದದ್ದು, ವರಕವಿ ಮುರುಘೇಂದ್ರ ಸ್ವಾಮಿ ನೆಲೆಸಿದ ಮೇಲೆಯೇ, ನೂರೆಂಟು ಕಲೆಗಳನ್ನು, ಪವಾಡಗಳನ್ನು ಮಾಡಿ ಸುತ್ತಮುತ್ತಲಿನ ಜನರನ್ನು ಆಕರ್ಷಿಸಿದಾಗಲೇ ಎಲೆರಾಜೋಳ ಗ್ರಾಮ ಹೆಸರಾದದ್ದು. ವರಕವಿ, ಪವಾಡ ಪುರುಷ, ಆತ್ಮಜ್ಞಾನಿ ನೆಲೆಸಿ ಆ ನೆಲವನ್ನು ಮೆಟ್ಟಿದುದರಿಂದಲೇ ಎಲೆರಾಜೋಳ ಗ್ರಾಮ ಪಾವನವಾಯಿತು. ಮುರುಘೇಂದ್ರ ಸ್ವಾಮಿ ಮೆಟ್ಟಿದ ಧರೆ ಅವಿಮುಕ್ತ ಕ್ಷೇತ್ರವಾಯಿತು.

ಮುರುಘೇಂದ್ರಸ್ವಾಮಿಗಳು ಎಲೆರಾಜೋಳ ಗ್ರಾಮದಲ್ಲಿ ನೆಲೆಸಿದ ಸಂದರ್ಭ, ಈ ಪ್ರದೇಶದಲ್ಲಿ ಅದರಲ್ಲೂ ಸೇಡಂ ತಾಲೂಕಿನಲ್ಲಿ ನಿಜಾಮನ ಪ್ರಭಾವ ಅಧಿಕವಾಗಿತ್ತು. ಈ ಪ್ರದೇಶದಲ್ಲಿ ಒತ್ತಾಯದಿಂದ ಆಡಳಿತ ಭಾಷೆಯಾದ ಉರ್ದುವನ್ನು ಜನಸಾಮಾನ್ಯರ ಮೇಲೆ ಹೇರಲಾಗಿತ್ತು. ಕನ್ನಡ

ಭಾಷೆ, ಕನ್ನಡ ಸಂಸ್ಕೃತಿ ಹೇಳ ಹೆಸರಿಲ್ಲದೆ ಅವನತಿಯ ಪಥದಲ್ಲಿ ಸಾಗಿತ್ತು. ಜನಸಾಮಾನ್ಯರು ಆರಂಭದಿಂದಲೂ ನಿಜಾಂ ಸರಕಾರದ ಆಳ್ವಿಕೆಯನ್ನು ವಿರೋಧಿಸಿ ಅವನ ಆಡಳಿತವನ್ನು ಬೇರು ಸಹಿತ ಕಿತ್ತು ಹಾಕುವಲ್ಲಿ ತಮ್ಮದೇ ಆದ ಹೋರಾಟ ಮಾರ್ಗವನ್ನು ಅನುಸರಿಸುತ್ತಿದ್ದರು. ರೈತಾಪಿ ವರ್ಗವಂತೂ ನಿಜಾಂನ ಆಡಳಿತವನ್ನು ಮೊಳಕೆಯಲ್ಲಿಯೇ ಚಿವುಟಲು ಪ್ರಯತ್ನಿಸುತ್ತಿದ್ದರು. ನಿಜಾಂ ರಾಜ್ಯದಲ್ಲಿ ವಿಲಿನವಾದ ಮಹಾರಾಷ್ಟ್ರದ ಕೆಲವು ಭಾಗ, ಆಂಧ್ರಪ್ರದೇಶದ ಕೆಲವು ಭಾಗಗಳಿಗಿಂತಲೂ, ಕರ್ನಾಟಕದ ಕನ್ನಡದ ಜನರು ಹೆಚ್ಚಿನ ತೊಂದರೆಗಳಿಗೆ ಒಳಗಾಗಿದ್ದರು, ಉಳಿದವರಂತೆ ಶೋಷಣೆಗೆ ಒಳಗಾಗಿದ್ದುದರ ಜೊತೆಗೆ ತೀವ್ರತರ ಸಾಂಸ್ಕೃತಿಕ ದಾಳಿಗೆ ತುತ್ತಾಗಿದ್ದರು. ಧಾರ್ಮಿಕ ಮತ್ತು ಸಾಮಾಜಿಕ ಸಮಾವೇಶಗಳನ್ನು ಮುಕ್ತವಾಗಿ ಸಂಘಟಿಸುವಂತಿರಲಿಲ್ಲ, ಶೈಕ್ಷಣಿಕ ಸೌಲಭ್ಯಗಳಿರಲಿಲ್ಲ, ಇದ್ದರೂ ಅಲ್ಪ ಸ್ವಲ್ಪ ಅದು ಕೇವಲ ಉರ್ದು. ಹೆಚ್ಚಿನ ಸಂಖ್ಯೆಯ ಹಿಂದೂಗಳು, ಕನ್ನಡಿಗರು ಹೈದರಾಬಾದ ಸಂಸ್ಥಾನದಲ್ಲಿ ಇದ್ದರು ಸರಕಾರದ ದುರಾಡಳಿತವನ್ನು ಬಹಿರಂಗವಾಗಿ ಟೀಕಿಸುತ್ತಿರಲಿಲ್ಲ, ವಿರೋಧಿಸುತ್ತಿರಲಿಲ್ಲ ಹಾಗೇನಾದರೂ ಮಾಡಿದರೆ ಮುಸ್ಲಿಂ ನಿಜಾಮ ಸರಕಾರ ಅವರನ್ನು ನಿರ್ದಯವಾಗಿ ಹತ್ತಿಕ್ಕುತ್ತಿತ್ತು. ಅಲ್ಲದೆ ಅವರನ್ನು ರಾಜದ್ರೋಹಿಗಳು ಎಂಬ ಲೇಪ ಹಚ್ಚಿ ಶಿಕ್ಷಿಸುತ್ತಿದ್ದರು.

ಧರ್ಮ-ಧರ್ಮಗಳ ನಡುವೆ ವಿಷಮತರ ಸ್ಥಿತಿ ಉಂಟಾದಾಗ 'ಲೋಕದಲ್ಲಿ ಧರ್ಮದ ಅವನತಿಯಾದಾಗಲೆಲ್ಲ, ದೇವರು ನಭದಿಂದ ನೆಲಕ್ಕಿಳಿದು ಬಂದು ಜನತೆಯನ್ನು ಕತ್ತಲೆಯಿಂದ ಬೆಳಕಿನೆಡೆಗೆ ಕೊಂಡೊಯ್ಯುತ್ತಾನೆ', ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಹೇಳಿದ ಹಾಗೇ ದೇವರ ರೂಪದಲ್ಲಿ ಮುರುಘೇಂದ್ರಸ್ವಾಮಿಗಳು ಈ ಧರೆಯ ಮೇಲೆ ಕಾಲಿಟ್ಟರು. ಎಲ್ಲ ಕಡೆಗಳಲ್ಲಿ ರಜಾಕಾರರು ದೌರ್ಜನ್ಯ, ಕೊಲೆ, ಲೂಟಿ, ಮಾನಭಂಗಗಳಲ್ಲಿ ತೊಡಗಿ ಗ್ರಾಮಗಳನ್ನು ರಾಕ್ಷಸರಂತೆ ಹಾಳು ಮಾಡಿದ್ದರು. ಆದರೆ ಸೇಡಂ ತಾಲೂಕಿನ ಈ ಎಲೆರಾಚೋಳ ಗ್ರಾಮ ಯಾವುದೇ ದಂಗೆ, ಗಲಭೆಗಳಲ್ಲಿ ದೌರ್ಜನ್ಯಗಳಿಗೆ ಒಳಗಾಗಿರಲಿಲ್ಲ. ಎಲೆರಾಚೋಳ ಗ್ರಾಮ ಶಾಂತಿಯ ಬೀಡಾಗಿತ್ತು. ಅಂತೆಯೇ ಮುರುಘೇಂದ್ರಸ್ವಾಮಿಗಳು ಆಧ್ಯಾತ್ಮ ಸಾಧನೆಗಾಗಿ ಲೋಕ ಸಂಚಾರ ಕೈಗೊಂಡು ಈ ಗ್ರಾಮಕ್ಕೆ ಬಂದರು. ಎಲ್ಲಿಯೂ ನೆಲೆ ನಿಲ್ಲದ ಮುರುಘೇಂದ್ರಸ್ವಾಮಿಗಳು ಎಲೆರಾಚೋಳ ಗ್ರಾಮದ ಭಕ್ತರ ಭಕ್ತಿಗೆ ಓಗೊಟ್ಟು ಇಲ್ಲಿ ನೆಲೆಸಲು ಸಿದ್ಧರಾದರು. ಎಲೆರಾಚೋಳ ಗ್ರಾಮದಲ್ಲಿ ನೆಲೆ ನಿಂತ ಮೇಲೆ ಅನೇಕ ಪವಾಡಗಳನ್ನು ಮಾಡಿ ಕೆಲವೇ ದಿನಗಳಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದುಕೊಂಡರು. ಮುರುಘೇಂದ್ರಸ್ವಾಮಿಗಳ ಪವಾಡವನ್ನು ನೋಡಲು ಅನುಭವದ ಮಾತುಗಳನ್ನು ಕೇಳಲು ಸುತ್ತಮುತ್ತಲಿನ ಜನ ಬಹುಸಂಖ್ಯೆಯಲ್ಲಿ ಎಲೆರಾಚೋಳದಲ್ಲಿ ಸೇರತೊಡಗಿದರು.

ಗುರುಗಳು ಇಲ್ಲಿ ನೆಲೆ ನಿಂತ ಮೇಲೆ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕಾರ್ಯ ಹೆಚ್ಚಾದವು. ಮುರುಘೇಂದ್ರಸ್ವಾಮಿ ಮಹಾಮಹಿಮರಾಗಿ, ಪವಾಡ ಪುರುಷರಾಗಿ, ಆಧ್ಯಾತ್ಮದ ಮಹಿಮರಾಗಿ, ಯಲ್ಲಮ್ಮ ದೇವಿಯನ್ನು ಒಲಿಸಿಕೊಂಡು ತಮ್ಮ ವಶದಲ್ಲಿರಿಸಿಕೊಂಡಿದ್ದರು. ಅವಧೂತರಾಗಿ, ವರಕವಿಯಾಗಿ,

ಹಲವು ಭಕ್ತರಿಗೆ ಒಂದೊಂದು ರೀತಿಯಲ್ಲಿ ಗೋಚರಿಸಿ ತಮ್ಮ ಲೀಲೆಗಳನ್ನು, ಪವಾಡಗಳನ್ನು ತಮ್ಮ ಜೀವನದುದ್ದಕ್ಕೂ ಭಕ್ತರಿಗೆ ತೋರ್ಪಡಿಸಿ ಭಕ್ತರನ್ನು ತಮ್ಮ ನಿಯಂತ್ರಣದಲ್ಲಿರಿಸಿಕೊಂಡು "ಶರಣರನ್ನು ಮರಣದಲ್ಲಿ ನೋಡು" ಎಂಬ ಶರಣರ ವಾಕ್ಯದಂತೆ ಭಕ್ತರಿಗೆ ಸಂದೇಶ, ಮಾರ್ಗದರ್ಶನ ನೀಡುತ್ತಾ ಅವರನ್ನು ಮೋಕ್ಷದೆಡೆಗೆ ಕೊಂಡೊಯ್ದರು. ಎಲೆರಾಚೋಳ ಗ್ರಾಮ ಇವರಿಂದ ಮುಕ್ತಿ ಪಡೆದು ಕರ್ನಾಟಕದ ಸಾಹಿತ್ಯ ಮತ್ತು ಜನಪದ ಸಾಹಿತ್ಯದ ಭೂಪಟದಲ್ಲಿ ಇಂದು ರಾರಾಜಿಸುತ್ತಿದೆ.

ಆಧ್ಯಾತ್ಮಿಕವಾಗಿ ಮುಂದುವರೆದರೂ ಇಂದೂ ಭೌತಿಕವಾಗಿ ಎಲೆರಾಚೋಳ ಗ್ರಾಮ ಅತ್ಯಂತ ಹಿಂದುಳಿದಿದೆ. ಈ ಗ್ರಾಮದಲ್ಲಿ ಕನಿಷ್ಠ ಮೂಲಭೂತ ಸೌಕರ್ಯಗಳು ನಮಗೆ ಕಾಣಸಿಗುವುದಿಲ್ಲ. ಹಿಂದಿನ ಸರಕಾರದ ಪ್ರಭಾವವೋ, ಅಥವಾ ಇಂದಿನ ಸರಕಾರದ ವೈಫಲ್ಯದಿಂದಲೋ ಈ ಗ್ರಾಮ ಗಡಿ ಗ್ರಾಮವಾಗಿ ಕರ್ನಾಟಕ ರಾಜ್ಯದಲ್ಲಿ ಹಿಂದುಳಿದಿದೆ ಎಂದು ಬರೀ ಬಾಯಿಮಾತಿನಿಂದ ಹೇಳಿದರೆ ಅದರ ಸ್ಥಿತಿ ಅರ್ಥವಾಗುವುದಿಲ್ಲ. ಅದನ್ನು ಅಂಕಿ ಅಂಶಗಳಿಂದ ನೋಡಿ ತೀರ್ಮಾನಿಸಬೇಕು. ವರಕವಿಯ ನೆಲೆಯಾಗಿ ಗುರುತಿಸಲ್ಪಡುವ ಈ ಗ್ರಾಮದಲ್ಲಿ ತೆಲುಗು ಪ್ರಭಾವ ಅತೀಯಾಗಿದ್ದು, ಗ್ರಾಮದ ಜನಜೀವನದಲ್ಲಿ ಅದು ಗಾಢವಾದ ಪರಿಣಾಮವನ್ನು ಬೀರಿದೆ ತಮ್ಮ ಮನೆಗಳಲ್ಲಿ ಮಾತೃ ಭಾಷೆ ಕನ್ನಡ ಬಳಸಿದರೂ ವ್ಯವಹಾರದಲ್ಲಿ ತೊಡಗುವ ಜನರು ತೆಲುಗು ಭಾಷೆಯನ್ನೇ ವ್ಯವಹಾರ ಭಾಷೆಯಾಗಿ ಬಳಸುವುದು ಇಲ್ಲಿ ಕಂಡು ಬರುತ್ತದೆ. ಇಲ್ಲಿನ ಜನರೂ ಕರ್ನಾಟಕಕ್ಕಿಂತ ಆಂಧ್ರ ರಾಜ್ಯದ ಮೇಲೆ ಹೆಚ್ಚು ವ್ಯಾಮೋಹ ತೋರುತ್ತಾರೆ. ಆಂಧ್ರದ ರಾಜಧಾನಿ ಹೈದರಾಬಾದ್ ಕೇವಲ ೧೭೫ ಕಿ.ಮೀ. ಇರುವುದರಿಂದಲೋ ಏನೋ ಎಲ್ಲ ವ್ಯವಹಾರಗಳು ಆಂಧ್ರದಲ್ಲಿ ನಡೆಯುತ್ತವೆ. ಎಲೆರಾಚೋಳ ಗ್ರಾಮದಿಂದ ಕೇವಲ ೧೨ ಕಿ.ಮೀ. ಕ್ರಮಿಸಿದರೇ ಆಂಧ್ರಪ್ರದೇಶದ ಗಡಿ ಪ್ರಾರಂಭವಾಗುತ್ತದೆ. ಆಂಧ್ರದ ಗಡಿ ಗ್ರಾಮಗಳು ಇಂದು ಸಾಕಷ್ಟು ಮುಂದುವರೆದಿವೆ ಎಲ್ಲ ಮೂಲಭೂತ ಸೌಕರ್ಯಗಳನ್ನು ಹೊಂದಿವೆ. ಆದ್ದರಿಂದ ಕರ್ನಾಟಕದ ಗಡಿ ಗ್ರಾಮಗಳು ಆಂಧ್ರಪ್ರದೇಶದಲ್ಲಿ ವಿಲೀನವಾಗಬೇಕೆಂಬ ಬಯಕೆಯು ಅಲ್ಲಿನ ಜನರಲ್ಲಿ ಕಂಡು ಬರುತ್ತದೆ.

**ಎಲೆರಾಚೋಳ ಗ್ರಾಮದ (ಈಗಿನ ಹೆಸರು ಕೆ.ರಾಚೋಳ) ವಿವರ**

| ಕ್ರ.ಸಂ. | ಗ್ರಾಮದ ಮಾಹಿತಿ | ಅಂಕಿ ಅಂಶಗಳು |
|---|---|---|
| ೦೧. | ಭೌಗೋಳಿಕ ವಿಸ್ತೀರ್ಣ | ೬೨೭-೧೪ |
| ೦೨. | ಸಾಗುವಳಿಗೆ ಯೋಗ್ಯವಾದ ಕ್ಷೇತ್ರ | ೪೮೯-೧೨ |
| ೦೩. | ಸಾಗುವಳಿಗೆ ಯೋಗ್ಯವಿಲ್ಲದ ಕ್ಷೇತ್ರ | ೮೩-೧೩ |
| ೦೪. | ಖರೀಫ ಬೆಳೆ ಕ್ಷೇತ್ರ | ೨೪೪-೧೫ |

| | | |
|---|---|---|
| ೦೫. | ರಬ್ಬಿ ಬೆಳೆಯ ಕ್ಷೇತ್ರ | ೩೨೩-೦೦ |
| ೦೬. | ಗ್ರಾಮದ ಜನಸಂಖ್ಯೆ ಗಂಡು-ಹೆಣ್ಣು | ಗಂ.೪೪೧+ಹೆ.೪೫೬=೮೯೭ |
| ೦೭. | ಒಟ್ಟು ಜಾನುವಾರುಗಳು | ೫೭೫ |
| ೦೮. | ಕುಡಿಯುವ ನೀರಿನ ಬಾವಿಗಳು | ೦೩ |
| ೦೯. | ಕೊಳವೆ ಬಾವಿಗಳ ಸಂಖ್ಯೆ | ೦೩ |
| ೧೦. | ಗ್ರಾಮದ ಮುಖ್ಯ ಬೆಳೆಗಳು | ತೊಗರಿ, ಜೋಳ, ಕವಳಿ (ಭತ್ತ) |
| ೧೧. | ಖಾತೆದಾರರ ಸಂಖ್ಯೆ | ೧೨೪ |
| ೧೨. | ಹರಿಜನ ಖಾತೆದಾರರು | ೩೦ |
| ೧೩. | ಹಿಂದೂ ದೇವಾಲಯಗಳು | ೧. ಹನುಮಾನ ದೇವಾಲಯ<br>೨. ಪೋಟಮ್ಮಾ ದೇವಾಲಯ<br>೩. ಮಾಶಮ್ಮ ದೇವಾಲಯ |
| ೧೪. | ಮುಸ್ಲಿಂ ದೇವಾಲಯ, ದರ್ಗಾ | ೦೧ ದರ್ಗಾ ಇರುವುದು |
| ೧೫. | ಜಾತ್ರೆಗಳು | ಮುರುಘೇಂದ್ರಸ್ವಾಮಿಯ ಜಾತ್ರೆ ನಡೆಯುತ್ತದೆ. |
| ೧೬. | ವೃದ್ಧಾಪ್ಯ ವೇತನ ಪಡೆಯುವವರು | ೦೪ |
| ೧೭. | ವಿಧವಾ ವೇತನ ಪಡೆಯುವವರು | ೧೫ |
| ೧೮. | ಅಂಗವಿಕಲ ವೇತನ ಪಡೆಯುವವರು | ೦೯ |
| ೧೯. | ಸ್ವಾತಂತ್ರ್ಯ ಯೋಧರು | ಇರುವುದಿಲ್ಲ |
| ೨೦. | ಗ್ರಾಮದಲ್ಲಿ ವಿದ್ಯುತ್ ಪೂರೈಕೆ | ಇರುತ್ತದೆ |
| ೨೧. | ಪ್ರಾಥಮಿಕ ಶಾಲೆ | ೧ ರಿಂದ ೫ರವರೆಗೆ ಇದೆ. |
| ೨೨. | ಪ್ರೌಢ ಶಾಲೆ | ಇರುವುದಿಲ್ಲ |
| ೨೩. | ಅಂಗನವಾಡಿ ಕೇಂದ್ರ | ಇರುವುದಿಲ್ಲ |
| ೨೪. | ತಂತಿ ಕಛೇರಿ | ಇರುವುದಿಲ್ಲ |

| | | |
|---|---|---|
| ೨೫. | ಅಂಚೆ ಕಛೇರಿ | ಇರುವುದಿಲ್ಲ |
| ೨೬. | ಮಳೆಮಾಪನ ಕೇಂದ್ರ | ಇರುವುದಿಲ್ಲ |
| ೨೭. | ಪೋಲಿಸ್ ಠಾಣೆ | ಇರುವುದಿಲ್ಲ (ಮುಧೋಳ ವ್ಯಾಪ್ತಿಗೆ ಸೇರಿದೆ) |
| ೨೮. | ಪ್ರಾಥಮಿಕ ಆರೋಗ್ಯ ಕೇಂದ್ರ | ಇರುವುದಿಲ್ಲ |

(ಮೂಲ: ಗ್ರಾಮ ಪಂಚಾಯತಿ, ಮುಧೋಳ, ಸೇಡಂ ತಾಲೂಕು)

**೧೦. ಕೌಟುಂಬಿಕ ಜೀವನ**

ಎಲೆರಾಜೋಳದಲ್ಲಿ ನೆಲೆಸಲು ನಿರ್ಧರಿಸಿದ ಮೇಲೆ ಕರಿಘೂಳೇಶ್ವರರ ಶುಭಾಶೀರ್ವಾದದಿಂದ ಹಾಗೂ ಈರಂಪಲ್ಲಿಯ ಈರಣ್ಣ ಗೌಡರ ಹಿರೇತನದಲ್ಲಿ ಯಾವ ಆಡಂಬರವಿಲ್ಲದೆ, ಸರಳ ರೀತಿಯಲ್ಲಿ ಭಕ್ತರ ಸಮ್ಮುಕದಲ್ಲಿ ಮುರುಘೇಂದ್ರಸ್ವಾಮಿಗಳು ಮಾಣಿಕಮ್ಮನವರನ್ನು ವಿವಾಹವಾಗುತ್ತಾರೆ. ಸಂಸಾರಿಕ ಜೀವನದಿಂದ ತಮ್ಮ ಉದ್ದೇಶಗಳಿಗೆ ಯಾವುದೇ ಅಡಚಣೆ ಆಗುವುದಿಲ್ಲವೆಂದು ಮನಗಂಡ ಮುರುಘೇಂದ್ರಸ್ವಾಮಿ ದಾಂಪತ್ಯ ಜೀವನಕ್ಕೆ ಕಾಲಿಡುತ್ತಾರೆ. ಮುರುಘೇಂದ್ರಸ್ವಾಮಿಗಳಿಗೆ ವಿವಾಹವಾಗಲು ಇಂಡಿ ತಾಲೂಕಿನ ಗೋಳಸಾರದ ಶರಣ, ಹಂಗನಳ್ಳಿಯ ಗುರುಲಿಂಗಪ್ಪ ಶರಣ, ಸಂತ ಶಿಶುನಾಳ ಶರೀಫ ಸಾಹೇಬರು, ಕಲಬುರ್ಗಿಯ ಶರಣಬಸವೇಶ್ವರರು, ರಾಮಕೃಷ್ಣ ಪರಮಹಂಸರು, ಅಬ್ಬೇ ತುಮಕೂರಿನ ವಿಶ್ವರಾಧ್ಯರು ಪ್ರೇರಣೆಯಾಗಿದ್ದರು. ಇವರೆಲ್ಲರೂ ಕೂಡ ಸಂಸಾರದಲ್ಲಿದ್ದುಕೊಂಡೇ ಸನ್ಯಾಸತ್ವವನ್ನು ಮುಂದುವರೆಸಿಕೊಂಡು ಬಂದವರಾಗಿದ್ದಾರೆ.

ಶರಣರ ವಾಣಿಯಂತೆ ಸತಿ-ಪತಿಗಳು ಒಂದಾದ ಭಕ್ತಿ ಶಿವನಿಗೆ ಅರ್ಪಿತವಾಗುತ್ತದೆ ಎಂದು ಮುರುಘೇಂದ್ರಸ್ವಾಮಿಗಳು ತಮ್ಮ ಆಧ್ಯಾತ್ಮಿಕ ಜೀವನ ಪ್ರಾರಂಭಿಸುವುದಕ್ಕೆ ಮುಂಚೆ ವಿವಾಹ ಬಂಧನದಲ್ಲಿ ಒಳಪಟ್ಟು, ತಮ್ಮ ಮುಂದಿನ ಜೀವನದ ಬೋಧನೆಗಳಲ್ಲಿ ಎಲ್ಲಿಯೂ ಸಂಸಾರ ತ್ಯಜಿಸಬೇಕೆಂದು ಹೇಳುವುದಿಲ್ಲ, ಸಂಸಾರದಲ್ಲಿದ್ದುಕೊಂಡು ಪಾರಮಾರ್ಥದ ಕಡೆಗೆ ಹೋಗಬೇಕೆಂಬುದೇ ಇವರ ಆಶಯವಾಗಿತ್ತು.

"ಹ್ಯಾಂಗ ಮಹಾಂತನಾಗುತೀ
ನೀ ಹ್ಯಾಂಗ ಬ್ರಾಂತಿ ನೀಗತೀ
ಹಾಂಗ ಹೀಂಗ ಹೊತ್ತುಗಳೆದು
ಹಿಂಗೇ ನೀ ಸತ್ತ ಹೋಗತೀ"[13]

(ಕೂಡಲೂರು ಬಸವಲಿಂಗ ಶರಣ)

ಸಂಸಾರದಲ್ಲಿದ್ದು ಹೊತ್ತುಗಳೆಯದೆ ಮೋಕ್ಷ ಪಡೆಯುವ ಮಹಾಂತನಾಗುವ ಹಂತವನ್ನು ತಲುಪಬೇಕೆಂಬ ಕಾತರ ಎಲ್ಲಾ ತತ್ವಪದಕಾರರಿಗಿರುವಂತೆ ಇವರಲ್ಲಿಯೂ ಇತ್ತು.

**ಮುರುಘೇಂದ್ರಸ್ವಾಮಿಯ ವಂಶವೃಕ್ಷ**




## ೧೧. ಯಾಕಾಂಬರಿ ಕ್ಷೇತ್ರ

ಮುರುಘೇಂದ್ರಸ್ವಾಮಿಗಳು ತಮ್ಮ ಆಧ್ಯಾತ್ಮಿಕ ಜೀವನ ಪ್ರಾರಂಭಿಸುವುದಕ್ಕೂ ಮೊದಲು ವಿವಾಹವಾಗಿ ಸಂಸಾರದಲ್ಲಿದ್ದುಕೊಂಡು ಸಿದ್ಧಿಯನ್ನು ಪಡೆಯಲು ಮಾಣಿಕಮ್ಮನವರ ಜೊತೆಗೂಡಿ ಯಾಕಾಂಬರಿ ಪುಣ್ಯಕ್ಷೇತ್ರಕ್ಕೆ ಬರುತ್ತಾರೆ. ಯಾಕಾಂಬರಿ ದೇವಸ್ಥಾನವನ್ನು ಈ ಮೊದಲು ಮೈಸೂರು ಜಿಲ್ಲೆಯ ನಂಜನಗೂಡು ತಾಲೂಕಿನ ಶಿವಪುರದಿಂದ ಮಲ್ಲಯ್ಯಸ್ವಾಮಿಗಳು ಬಂದು ಇಲ್ಲಿ ನೆಲೆಸಿ ದೇವಸ್ಥಾನದ ಜೀರ್ಣೋದ್ಧಾರವನ್ನು ಮಾಡಿದ್ದರು. ಭೌತಿಕ ರಚನೆಯಲ್ಲಿ ಯಾಕಾಂಬರಿ ದೇವಸ್ಥಾನವು ಏಳು ಬಾವಿಗಳ ಮೇಲೆ ನಿರ್ಮಾಣಗೊಂಡಿದೆ. ಈ ಏಳು ಬಾವಿಗಳಲ್ಲಿ ಸದಾ ಕಾಲ ನೀರಿರುತ್ತದೆ. ಈ ನೀರು ದೇವಸ್ಥಾನದ ಮುಂದಿರುವ ಗದ್ದೆಗಳಿಗೆ ಆಸರೆಯೂ ಆಗಿದೆ.

ಯಾಕಾಂಬರಿ ದೇವಸ್ಥಾನದಲ್ಲಿನ ದೇವರು ಶಿವಲಿಂಗದ ರೂಪದಲ್ಲಿದ್ದು ಪ್ರತಿ ಶ್ರಾವಣ ಮಾಸದಲ್ಲಿ ಅದ್ದೂರಿಯಿಂದ ಉತ್ಸವ (ಜಾತ್ರೆ) ನಡೆಯುತ್ತದೆ. ಈ ದೇವಸ್ಥಾನವು ನಿರ್ಜನ ಪ್ರದೇಶದಲ್ಲಿ ಅಂದರೇ ಜನ ವಸತಿ ಇರದ ಕಾಡಿನಲ್ಲಿ ಸುಂದರ ಪ್ರಕೃತಿಯ ನಡುವೆ ನಿರ್ಮಾಣಗೊಂಡಿದೆ. ಯಾಕಾಂಬರಿ ದೇವಸ್ಥಾನವು ಹಿಂದೂ ಮುಸ್ಲಿಂಮರ ಸೌಹಾರ್ದ ಬೆಸೆಯುವ ಕೇಂದ್ರವಾಗಿಯೂ ಕಂಡು ಬರುತ್ತದೆ. ಇದೇ ದೇವಸ್ಥಾನದ ಏಳು ಬಾವಿಗಳ ಮೇಲೆ ಶಿವಲಿಂಗನ ಗುಡಿಯ ಪಕ್ಕದಲ್ಲಿಯೇ 'ಯಾಕುಬ್‌ಸಾಬ್ ಉಸ್ಮಾನ್‌ಪಾಶಾ'ನ ಸಮಾಧಿ ಇದೆ. ಈ ಯಾಕುಬ್‌ಸಾಬ ಸಂತರು ಕ್ರಿ.ಶ.೧೮೯೦ರಲ್ಲಿ ಈ ಸ್ಥಳದಲ್ಲಿ ವಾಸವಾಗಿದ್ದವರು. ಇವರ ಪವಾಡಗಳನ್ನು ಜನರು ಕೂಡ ಇಂದಿಗೂ ಕೊಂಡಾಡುತ್ತಾರೆ. ದೇವಸ್ಥಾನಕ್ಕೆ ಬರುವ ಹಿಂದೂಗಳು ಮತ್ತು ಮಸೂದಿಗೆ ಬರುವ ಮುಸ್ಲಿಂರು ಜಾತಿಭೇದ ಮರೆತು ಪರಸ್ಪರ ಒಂದುಗೂಡಿ ಇವರಿರ್ವರಿಗೂ ನಡೆದುಕೊಳ್ಳುತ್ತಾರೆ. ಇಂದಿಗೂ ಹಿಂದೂ ಪೂಜಾರಿಯೇ ಈ ಸಮಾಧಿಯ ಪೂಜೆ ಮಾಡುತ್ತಾರೆ. ಈ ಪವಿತ್ರ ಸ್ಥಳವು ಹಿಂದೂ-ಮುಸ್ಲಿಂ ಕೋಮುಸೌಹಾರ್ದತೆಯ

ಸಂಕೇತವಾಗಿಯೂ ಕಂಗೊಳಿಸುತ್ತದೆ. ಇಂತಹ ಭಾವೈಕ್ಯತೆಯ ಕೇಂದ್ರಗಳು ಹೈದರಾಬಾದ್-ಕರ್ನಾಟಕದ ತುಂಬೆಲ್ಲಾ ವ್ಯಾಪಿಸಿವೆ.

ಯಾಕಾಂಬರಿ ಗ್ರಾಮ ಮತ್ತು ದೇವಸ್ಥಾನ ಇಂದು ಆಂಧ್ರಪ್ರದೇಶದ ರಂಗಾರೆಡ್ಡಿ ಜಿಲ್ಲೆಯ ಬಸಿರಾಬಾದ ಮಂಡಲದ, ನೆಳ್‌ಪಲ್ಲಿಯಲ್ಲಿ ವಿಲೀನವಾಗಿದೆ. ಇಂತಹ ಪವಿತ್ರ ತಾಣದಲ್ಲಿ ಮುರುಘೇಂದ್ರಸ್ವಾಮಿಗಳು ಮೊಟ್ಟ ಮೊದಲ ಬಾರಿಗೆ ೩೧ ದಿನಗಳ ಯಶಸ್ವಿ ತಪಸ್ಸನ್ನು (ಅನುಷ್ಠಾನ) ಕೈಗೊಳ್ಳುತ್ತಾರೆ.

ಸಮಾಜ ಕಲ್ಯಾಣ, ಲೋಕ ಉದ್ಧಾರಕ್ಕಾಗಿ ತಮ್ಮ ಸರ್ವಸ್ವವನ್ನು ಅರ್ಪಿಸಿದ ಮುರುಘೇಂದ್ರಸ್ವಾಮಿಗಳು ಸಮಾಜದಲ್ಲಿ ತೊಡಕು-ಆತಂಕ, ವರ್ಗ-ಸಂಘರ್ಷ, ವರ್ಣ-ಭೇದ, ಜಾತಿ-ಭೇದ, ಅಕ್ರಮ ಸಂಬಂಧಗಳನ್ನು ಖಂಡಾತುಂಡವಾಗಿ ತಮ್ಮ ಹಾಡುಗಳ ಮೂಲಕ ಹೇಳುತ್ತಾ ಅದರಿಂದಾಗುವ ಪರಿಣಾಮವನ್ನು ತಿಳಿಸುತ್ತಾ ಸಮಾಜ ಸುಧಾರಣೆ ಮಾಡುವ ಕಾರ್ಯವನ್ನು ಮಾಡಿದ್ದಾರೆ. ಮುರುಘೇಂದ್ರಸ್ವಾಮಿಗಳು ತಮ್ಮ ಜೀವನದಲ್ಲಿ ಕಂಡುಂಡ ಅನುಭವಗಳನ್ನು, ಪದಗಳ, ಹಾಡುಗಳ ರೂಪದಲ್ಲಿ ರಚಿಸಿ ಜನ ಸಾಮಾನ್ಯರ ನಾಲಿಗೆಯ ಮೇಲೆ ಹೊರಳಾಡುವಂತೆ ಮಾಡಿ ಅವರವರ ತಪ್ಪುಗಳನ್ನು ತಿದ್ದಿ ಜನರನ್ನು ಸನ್ಮಾರ್ಗದ ಕಡೆಗೆ ಒಯ್ದುರು.

ಮುರುಘೇಂದ್ರಸ್ವಾಮಿಗಳು ಮೂರುನೂರರವತ್ತು (೩೬೦) ವಿದ್ಯೆಗಳನ್ನು ಬಲ್ಲವರಾಗಿದ್ದು ಸಮಸ್ತ ಜೀವರಾಶಿಗಳನ್ನು ಉದ್ಧರಿಸಬೇಕೆಂಬ ದಯಾಪೂರ್ಣ ಹೃದಯವುಳ್ಳವರಾಗಿದ್ದು ಸ್ವತಃ ಮಾಯಮೋಹದಿಂದ ಬಿಡುಗಡೆಯಾದ ಪ್ರಯುಕ್ತವೇ ಮಾಯಮೋಹದಲ್ಲಿ ಬಿದ್ದವರನ್ನು ಜ್ಞಾನಬೋಧೆಯಿಂದ ಮೇಲೆತ್ತಿ, ನಿರ್ಭಯವಾಗಿ ಭಯಗೊಂಡ ಭಕ್ತರಿಗೆ, ಶಿಷ್ಯರಿಗೆ ಅಭಯವನ್ನು ನೀಡುತ್ತಾ ಭಕ್ತರನ್ನು ಸಲುಹಿ ಬೆಳೆಸಿದರು. ಭಕ್ತರಲ್ಲಿ ಮತ್ತು ಶಿಷ್ಯರಲ್ಲಿ ಎಂದಿಗೂ ಏನನ್ನೂ ಬೇಡದೆ ಚನ್ನಬಸವಣ್ಣನವರ ಉಕ್ತಿಯಂತೆ "ಬೇಡುವಾತ ಜಂಗಮನಲ್ಲ" ಎಂಬುದಕ್ಕೆ ಬದ್ಧರಾದಂತೆ ಮುರುಘೇಂದ್ರಸ್ವಾಮಿಗಳು ಕಂಡು ಬರುತ್ತಾರೆ. ಜಂಗಮನು ನಿರಾಬಾರಿ ಸದ್ಗುರುವೆನಿಸಿದ್ದಾನೆಂದು ಕರುಣ-ಸತತಿ, ಶಾಸ್ತ್ರ-ಪರಿಣತ, ಸೌಂದರ್ಯತೆ-ನಿರಾಶೆಗಳೆಂಬ ಪಾರಮಾರ್ಥಿಕ ಸಂಪತ್ತಿನಿಂದ ಶೋಭಾಯಮಾನನಾಗಿರುವಂತೆ, ಜ್ಞಾನ, ಐಶ್ವರ್ಯ, ಯಶಸ್ಸು, ಧರ್ಮ, ವೀರ-ತೇಜಸ್ಸುಗಳೆಂಬ ಷಡ್ಗೈಶ್ವರ್ಯ ಭರಿತನಾಗಿರುತ್ತಾನೆಂದು ಜಂಗಮತ್ವದ ಸಂದೇಶವನ್ನು ಸಾರಿದರು.

ಹುಟ್ಟು ಸಾವುಗಳ ಮಧ್ಯದ ಬದುಕು ಸಾಮರಸ್ಯದಿಂದ ಕೂಡಿರಬೇಕು ಇಂಥ ಬದುಕನ್ನು ಬದುಕಲೆಂದೇ ಬಂದವರು ವಿರಳ, ಇಂಥ ಬದುಕನ್ನು ಬಯಸಿಯೂ ಅದನ್ನು ಸಾಧಿಸಲಾರರು. ಇನ್ನು ಹಲವರು ಸಾಮರಸ್ಯದ ಬದುಕನ್ನು ಅರಿಯದೆ ಅಂಧಕಾರದಲ್ಲಿ ಮುಳುಗಿದ್ದು ತನ್ನ ಸಮೀಪದವರನ್ನು

ಅಜ್ಞಾನ-ಅಂಧಕಾರದಲ್ಲಿ ಮುಳುಗಿ ಹೋಗುವವರು ಇದ್ದು ಸತ್ತಂತೆಯೇ ಸರಿ. ಆತ್ಮರು ತಮ್ಮ ಸಾಮರಸ್ಯದ ಬದುಕನ್ನು ತೋರಿ ಇತರರನ್ನು ಬದುಕುವಂತೆ ಆಶಿಸುತ್ತಾರೆ. ಅಂಥ ಅನುಕೂಲತೆಯನ್ನು ಒದಗಿಸಿಕೊಡುವ ಮಹಾನ್ ಆಧ್ಯಾತ್ಮರ, ಪವಾಡಪುರುಷ ಸಾಲಿನಲ್ಲಿ ಮುರುಘೇಂದ್ರಸ್ವಾಮಿಗಳು ನಮಗೆ ಕಂಡು ಬರುತ್ತಾರೆ.

## ೧.೨. ಮುರುಘೇಂದ್ರಸ್ವಾಮಿ ಲೋಕ ಸಂಚಾರ ಕೈಗೊಂಡ ಸ್ಥಳಗಳು, ಗ್ರಾಮಗಳು

೧. ರಾಯಚೂರು
೨. ಶಹಾಪುರ
೩. ಅಲಿಗೇಡ
೪. ನಾರಾಯಣಪೇಟ
೫. ಕೋಲಾರ
೬. ಹಂಪೆ
೭. ಬೊಂಬಾಯಿ
೮. ಹೈದರಾಬಾದ
೯. ಫರತಾಬಾದ
೧೦. ನಾಯ್ಕಲ
೧೧. ಖಾನಾಪುರ
೧೨. ಮಹಾದ್ವಾರ
೧೩. ಇರಂಪಲ್ಲಿ
೧೪. ಹಂಗನಳ್ಳಿ
೧೫. ಕೋಲಕುಂದಾ
೧೬. ದ್ಯಾವನೂರ
೧೭. ನಾಚವಾರ
೧೮. ಯಾದಗೀರ
೧೯. ಹತ್ತಿಕುಣಿ
೨೦. ಯರಗೋಳ
೨೧. ಚಿತ್ತಾಪುರ
೨೨. ಕಲಕಂಬ

## ೧.೩. ಮುರುಘೇಂದ್ರಸ್ವಾಮಿಯ ಪವಾಡಗಳು

ಮಾನವನ ಸಾಮಾನ್ಯ ಆಲೋಚನೆಗೆ ನಿಲುಕದ ಅನೇಕ ಘಟನೆಗಳು ಪ್ರಪಂಚದಲ್ಲಿ ಪ್ರತಿನಿತ್ಯವೂ ಎಲ್ಲಾದರೂ ನಡೆಯುತ್ತಲೇ ಇರುತ್ತವೆ. ಜೀವನದಲ್ಲಿ ಪ್ರತಿಯೊಬ್ಬನೂ ಸುಖ ಅಪೇಕ್ಷಿಯಾಗಿ ತನ್ನ ಚಾತುರ್ಯವನ್ನೆಲ್ಲಾ ಉಪಯೋಗಿಸಿ ಸಾಮರ್ಥ್ಯವನ್ನು ತೋರಿ ಕೆಲವುಸಲ ನ್ಯಾಯ ಮಾರ್ಗದಲ್ಲಿ ಹಲವು ಸಲ ಅನ್ಯಾಯ ಮಾರ್ಗದಲ್ಲಿ ನಡೆದು, ಜೀವನದಲ್ಲಿ ಸುಖ ಶಾಂತಿ ಸಾಧನೆಗಾಗಿ ಹೋರಾಡುತ್ತಲೇ ಇರುವುದು ಎಲ್ಲರ ಅನುಭವದ ವಿಚಾರವಾಗಿದೆ. ಮನುಷ್ಯ ತನ್ನ ಎಲ್ಲ ಪ್ರಯತ್ನಗಳನ್ನು ಬುದ್ಧಿವಂತಿಕೆಯಿಂದ ನಡೆಸಿ ಒಂದು ಕಾರ್ಯದಲ್ಲಿ ವಿಫಲನಾದರೆ ಅದೃಷ್ಟಹೀನ ಅಥವಾ ಯಾವುದೋ ಅಲೌಕಿಕ ಶಕ್ತಿ(ಭೂತ,ಪ್ರೇತ)ಯಿಂದ ತಾನು ಸೋಲನ್ನನುಭವಿಸುತ್ತಿರುವೆ ಎಂದು ಭಾವಿಸುತ್ತಾನೆ. ಹೀಗೆ ಜೀವ-ಜಡ

ಪ್ರಕೃತಿಗಳಲ್ಲಿ ಕಂಡು ಬರುವ ಅನೇಕ ಅನಿರೀಕ್ಷಿತವೂ, ವಿಸ್ಮಯಕರವೂ ಆದ ಘಟನೆಗಳು ನಡೆಯುವಾಗ ಜನರು ಮಾಟ-ಮಂತ್ರ-ಪವಾಡಗಳಿಗೆ ಮೊರೆ ಹೋಗುವುದುಂಟು.

ಕಾಲದಿಂದ ಕಾಲಕ್ಕೆ ಕಾಣಿಸಿಕೊಂಡ ಆಚಾರ್ಯರು, ಪ್ರವಾದಿಗಳು ಹಾಗೂ ಸಂತರ ಜೀವನ ಚರಿತ್ರೆಯು ಪವಾಡಗಳಿಂದ ಕೂಡಿರುತ್ತದೆ. ಇವರೆಲ್ಲರಂತೆ ಮುರುಘೇಂದ್ರ ಸ್ವಾಮಿಯ ಬದುಕು ಇದಕ್ಕೆ ಹೊರತಾಗಿಲ್ಲ. ಎಲ್ಲ ಸಂತರ, ಶರಣರ, ಅನುಭಾವಿಗಳ ಹೆಸರಿನಲ್ಲಿ ಪವಾಡಗಳು ಲಭ್ಯವಿರುವಂತೆ ಮುರುಘೇಂದ್ರಸ್ವಾಮಿಯ ಚರಿತ್ರೆಯಲ್ಲಿಯೂ ಹಲವು ಪವಾಡಗಳು ಸಮಾನ ಆಶಯಗಳನ್ನು ಹೊಂದಿರುತ್ತವೆಂಬುದಕ್ಕೆ ಇವರ ಪವಾಡಗಳೇ ನಿದರ್ಶನಗಳಾಗಿವೆ.

ಪವಾಡ ಎಂಬ ಶಬ್ದವನ್ನು ಇಂಗ್ಲೀಷಿನ 'Miracle' ಎಂಬುದಕ್ಕೆ ಸಂವಾದಿಯಾಗಿ ಬಳಸಲಾಗುತ್ತದೆ. 'Miracle is generally defined by the etyindogy of the word as that wich cause wonder andostonishment being extra ordinary in itself and inerplicable by anormal standard are as a sign of indicating.[4] ಪವಾಡವು ಅಘಟಿತ ಘಟನೆಯನ್ನು ಒಳಗೊಂಡಿದ್ದು, ಅದು ಜನಸಾಮಾನ್ಯರ ಅನುಭವಕ್ಕಿಂತ ಬೇರೆಯಾದ ವಿಲಕ್ಷಣವಾದ ಸಂಗತಿಯಾಗಿರುತ್ತದೆ. ಮುರುಘೇಂದ್ರಸ್ವಾಮಿಯ ಜೀವನದಲ್ಲಿನ ಪವಾಡಗಳು ಮಾಟ-ಮಂತ್ರ-ಭಾನಾಮತಿ ಮೇಲೆ ನಿಂತಿವೆ.

ಮಾಟ-ಮಂತ್ರ-ಭಾನಾಮತಿ ಜನಪದರ ಜೀವನದಲ್ಲಿ ಹಾಸುಹೊಕ್ಕಾಗಿರುವುದು ಕಂಡು ಬರುತ್ತದೆ. ಜನಪದರಲ್ಲಿ ಮಾಟ-ಮಂತ್ರಗಳು ಮೂಡಿ ಬರಲು ಅವರ ಅತಿಯಾದ ನಂಬಿಕೆಗಳೇ ಕಾರಣವಾಗುತ್ತವೆ. ಮಿಂಚು-ಗುಡುಗು-ಸಿಡಿಲು, ಗಾಳಿ, ಬಿರುಗಾಳಿ, ಘೋರಮಳೆ, ನೆರೆ ಹಾವಳಿಗಳಂತಹ ನಿಸರ್ಗದ ಅದ್ಭುತ ರಹಸ್ಯಗಳನ್ನರಿಯದೆ ಅತೀಮಾನುಷ ಶಕ್ತಿಯೊಂದು ಅವುಗಳನ್ನೆಲ್ಲ ನಿಯಂತ್ರಿಸುತ್ತದೆ ಎಂದು ನಂಬಿ ಅವುಗಳ ಸತ್ಯದ ಮೂಲ ಅರಿಯದೆ ಜನರು ಅತೀಮಾನುಷ ಶಕ್ತಿಗಳಿಗೆ ಮೊರೆ ಹೋಗುತ್ತಾರೆ. ಇದು ಪ್ರಕೃತಿಯ ಆರಾಧನೆಗಾದರೆ, ಇನ್ನೂ ದಿನನಿತ್ಯದ ಬದುಕಿನಲ್ಲಿ ಎದುರಾಗುವ ಸಂದಿಗ್ಧತೆಯಿಂದ ಪಾರಾಗಲು ಅಲ್ಲದೇ ಆ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ಮತ್ತು ಬೇರೆಯವರ ಅಭಿವೃದ್ಧಿಯನ್ನು ಸಹಿಸಿಕೊಳ್ಳದೆ ಅವರ ಶ್ರೇಯಸ್ಸು, ಹೆಮ್ಮೆ, ಧನವೃದ್ಧಿಯಾಗುವದನ್ನು ತಡೆದು, ತನ್ನ ಕಡೆ ತಿರುಗಿಸಿಕೊಳ್ಳುವುದಕ್ಕೆ ಜನಪದರು ಮಾಟ-ಮಂತ್ರಗಳಿಗೆ ಶರಣಾಗುತ್ತಾರೆ.

ಮಾಟ-ಮಂತ್ರಗಳನ್ನು ಕುರಿತು ಮಾನವಶಾಸ್ತ್ರಜ್ಞರು ಅಧ್ಯಯನ ಕೈಗೊಂಡು ಅವುಗಳನ್ನು ತಮ್ಮದೇ ಆದ ವ್ಯಾಖ್ಯೆ, ಬಗೆಗಳಲ್ಲಿ ತಿಳಿಸಿದ್ದಾರೆ. ಅವುಗಳನ್ನು ೧. ದೇಶಿಯ ಮಾಟ ಮತ್ತು ೨. ವಿದೇಶಿಯ ಮಾಟಗಳೆಂದು ಗುರುತಿಸಿದ್ದಾರೆ. ಇವರು ದೇಶಿಯ ಮಾಟವನ್ನು ೨ ಬಗೆಗಳಲ್ಲಿ ವಿಶ್ಲೇಷಿಸಿದ್ದಾರೆ.

೧. **ಸಾದೃಶ್ಯ ನಿಯಮ:** ಸಾಮಾನ್ಯವಾಗಿ ಒಬ್ಬ ಮಾಟಗಾರ ಒಬ್ಬ ವ್ಯಕ್ತಿಯ ಮೇಲೆ ಮಾಟ ಮಾಡಬೇಕಾದಾಗ ಒಂದು ಹೆಣ್ಣಿನ ಅಥವಾ ಗಂಡಿನ ಮರದ ಬೊಂಬೆಯನ್ನು ಮಾಡಿ ಅದನ್ನು ಮುಳ್ಳಿನಿಂದ

ಚುಚ್ಚಿದರೆ ಉದ್ದೇಶಿತ ವ್ಯಕ್ತಿಗೂ ಮುಳ್ಳು ಚುಚ್ಚಿದ ಅನುಭವವಾಗುತ್ತದೆ. ಹಾಗೂ ಆ ಗೊಂಬೆಗೆ ಅವನು ಏನೆಲ್ಲಾ ತೊಂದರೆಗಳನ್ನು ಕೊಡುತ್ತಾನೆಯೋ ಅದಕ್ಕೆ ಸಾದೃಶ್ಯವಾದ ಎಲ್ಲ ತೊಂದರೆಗಳು ಉದ್ದೇಶಿತ ವ್ಯಕ್ತಿಗೆ ಉಂಟಾಗುತ್ತವೆ. ಈ ಕ್ರಿಯೆಗಳನ್ನು ಸಾಮಾನ್ಯವಾಗಿ ಆದಿತ್ಯವಾರ, ಅಮವಾಸ್ಯೆಗಳಂದು ಅವುಗಳಲ್ಲಿ ಸಿದ್ಧಿ ಪಡೆದ ಸಿದ್ಧಿಗಳಿಂದ ನೆರವೇರಿಸಲಾಗುತ್ತದೆ. ಇದು ಬಹಳ ಗೌಪ್ಯ ರೀತಿಯಲ್ಲಿ ಜರಗುವ ಕ್ರಿಯೆ.

೨. **ಸಂಪರ್ಕ ನಿಯಮಮಾಟ:** ಮಾಟಗಾರ ತಾನು ಮಾಟ ಮಾಡಬೇಕೆಂದು ಉದ್ದೇಶಿದ ವ್ಯಕ್ತಿಯ ಸಂಪರ್ಕ ಪಡೆದು ಬಟ್ಟೆ, ಉಗುರು, ಕೂದಲು ಅಥವಾ ಯಾವುದಾದರೂ ವಸ್ತುವಿನ ಮೇಲೆ ಮಾಟ ಮಾಡಿದರೆ ಅದರ ಪರಿಣಾಮ ಉದ್ದೇಶಿತ ವ್ಯಕ್ತಿಯ ಮೇಲೆ ಆಗುತ್ತದೆ.

**ರೇಮುಂಡ್ ಪರ್ತ್:** ಈ ಮೇಲೆ ತಿಳಿಸಿದ ಎರಡು ಬಗೆಯ ಪವಾಡಗಳನ್ನು ಆಧಾರವಾಗಿಟ್ಟುಕೊಂಡು ರೇಮುಂಡ್‌ಪರ್ತ್‌ರವರು ೩ ಬಗೆಗಳಲ್ಲಿ ಮಾಟವನ್ನು ವಿವರಿಸುತ್ತಾರೆ.

ಅ. **ಉತ್ಪಾದಕಮಾಟ:** ವ್ಯವಸಾಯ, ಬೇಟೆ, ಮೀನುಗಾರಿಕೆ ಇಂತಹವುಗಳಲ್ಲಿ ಹೆಚ್ಚಿನ ಫಲವನ್ನು ಪಡೆಯಲು, ಪ್ರೀತಿಯನ್ನು ಕುದುರಿಸಲು ಮಾಡುವ ಮಾಟ ಇದಾಗಿದೆ.

ಬ. **ರಕ್ಷಣಾಮಾಟ:** ಕೆಟ್ಟದ್ದನ್ನು ತಡೆಯಲು, ದುರಾದೃಷ್ಟವನ್ನು ತಡೆಗಟ್ಟಲು, ಪ್ರಯಾಣದಲ್ಲಿ ಆಗಬಹುದಾದ ಅಪಘಾತಗಳನ್ನು, ಕಾಯಿಲೆಯನ್ನು ತಡೆಗಟ್ಟಲು, ಆಸ್ತಿಯನ್ನು ರಕ್ಷಣೆ ಮಾಡಿಕೊಳ್ಳಲು ಮಾಡುವ ಮಾಟಗಳು ಇವಾಗಿವೆ.

**ಕ. ವಿನಾಶಾತ್ಮಕಮಾಟ:** ಕಾಯಿಲೆ ಬರಿಸಲು, ಬೇರೆಯವರನ್ನು ಸಾಯಿಸಲು, ಬೇರೆಯವರ ಆಸ್ತಿಯನ್ನು ಹಾಳು ಮಾಡಲು ಮಾಡುವ ಮಾಟಗಳನ್ನು ವಿನಾಶಾತ್ಮಕ ಮಾಟಗಳು ಎಂದು ಕರೆಯುವ ಪದ್ಧತಿ ಇದೆ. ಇದು ಜನಪದರಲ್ಲಿ ಸಾಮಾಜಿಕ ಒಪ್ಪಿಗೆಯನ್ನು ಪಡೆಯುವುದಿಲ್ಲ.

ಮಂತ್ರ-ಮಾಟಗಾರನ ಬಗ್ಗೆ ಹೇಳುವುದಾದರೆ ತಮ್ಮ ಮೂಲ ಮಾನವ ಶಕ್ತಿಯೊಂದು ಸಾಲದೆ ಹೋಗುವಂತಹ ವಿಶೇಷ ಸಂದರ್ಭಗಳಲ್ಲಿ ಮಾತ್ರ ಅದಕ್ಕೆ ಪೋಷಕವಾಗಿ ಮಂತ್ರ ವಿದ್ಯೆಯನ್ನು ಸರಿಹೊಂದಿಸಿ ಪ್ರಯೋಗಿಸುವವನು ಮಂತ್ರವಾದಿ, ಮಂತ್ರವಾದಿಗೆ ತನ್ನ ಶತ್ರುವನ್ನು ನಾಶಪಡಿಸುವ ಶಕ್ತಿ ಇರುವುದು. ಅಂತಹ ಶಕ್ತಿಯನ್ನು ಮತ್ತೊಬ್ಬ ವ್ಯಕ್ತಿಯ ಪರವಾಗಿಯೂ ಪ್ರಯೋಗಿಸಬಹುದು. ಋಜುಮಾರ್ಗದಿಂದ ಆಗದಿದ್ದರೆ ವಾಮಮಾರ್ಗದಲ್ಲಿಯಾದರೂ ಸರಿ, ನಡೆದು ನೋಡುವ ಪ್ರಯತ್ನ ಮಾಡುತ್ತಾರೆ. ಮಾಟ ಮಂತ್ರವು ಮಾಂತ್ರಿಕನ ಶರೀರದಲ್ಲಿಯೇ ಅಡಗಿರುವುದೆಂದು ಜನರು ನಂಬಿರುವುದರಿಂದಲೇ ಮಂತ್ರವಾದಿಯ ಬಗ್ಗೆ ಜನರಲ್ಲಿ ಹೆಚ್ಚಾಗಿ ಭಯ ಮತ್ತು ಅತ್ಯಲ್ಪ ಪ್ರಮಾಣದ ಭಕ್ತಿ ಕಂಡು ಬರುತ್ತದೆ.

ಸಾಮಾನ್ಯವಾಗಿ ಹಳ್ಳಿಗರು ಮನರಂಜನೆಯನ್ನು ಪಡೆದುಕೊಳ್ಳುತ್ತಿದ್ದುದು ಸುಗ್ಗಿಯ ಕಾಲದಲ್ಲಿ, ತಮ್ಮ ವರ್ಷದ ದುಡಿಮೆಯೆಲ್ಲ ಮುಗಿದು, ವರ್ಷದ ದುಡಿಮೆಯ ಫಲವನ್ನು ಮನೆಯಲ್ಲಿ ತುಂಬಿಕೊಂಡ ಮೇಲೆ

ಬಯಲಾಟ, ಗೊಂಬೆಯಾಟಗಳಂತಹ ಮನರಂಜನೆಯತ್ತ ಗಮನ ಕೊಡುತ್ತಿದ್ದರು. ಸಾಮಾನ್ಯವಾಗಿ ಜನಪದರು ಜನಪದ ರಂಗಕಲೆಗಳಿಗೆ ಮಾರು ಹೋಗುತ್ತಾರೆ. ಅದ್ದೂರಿಯಲ್ಲದ ಈ ರಂಗಕಲೆಗಳು ಬಡ ಗ್ರಾಮೀಣರ ಜೀವನದಲ್ಲಿ ಒಂದು ಮಹತ್ವದ ಭಾಗವಾಗಿ ಕಂಡು ಬರುತ್ತದೆ.

ಎಲ್ಲ ಜನಪದರಂತೆ ಮುರುಘೇಂದ್ರಸ್ವಾಮಿಗಳ ಜನಪದ ಕಲೆಗಳನ್ನು ಅತಿಯಾಗಿ ಪ್ರೀತಿಸುತ್ತಿದ್ದರು. ತೊಗಲು ಗೊಂಬೆಯಾಟ, ಗೊಂಬೆಯಾಟ, ಬಯಲಾಟ, ದೊಡ್ಡಾಟ, ಸಣ್ಣಾಟ, ನಾಟಕಗಳಲ್ಲಿ ತೀವ್ರ ಆಸಕ್ತಿ ತೋರುತ್ತಿದ್ದರು. ಚಿಕ್ಕ ವಯಸ್ಸಿನಿಂದಲೇ ರಂಗಕಲೆಗಳನ್ನು ಪ್ರೀತಿಸುವುದ ಕಲೆತು ಸ್ವತಃ ಈ ಕಲೆಗಳನ್ನು ಜನರ ಮುಂದೆ ಪ್ರದರ್ಶಿಸುತ್ತಿದ್ದರು. ರಂಗಕಲೆಗಳಲ್ಲಿಯೇ ಅವರು ಗೊಂಬೆಯಾಟ ಪ್ರದರ್ಶಿಸುವುದನ್ನು ಕರಗತ ಮಾಡಿಕೊಂಡಿದ್ದರು.

ಮುರುಘೇಂದ್ರಸ್ವಾಮಿಗಳನ್ನು ಸಹಿಸದ ಕೆಲವು ಗುಂಪುಗಳು ಅವರ ಮೇಲೆ ಮಂತ್ರ-ತಂತ್ರಗಳನ್ನು ಪ್ರಯೋಗಿಸಿ ಅವರಿಗೆ ಮಾಟ-ಭಾನಾಮತಿಗಳನ್ನು ಮಾಡಿ ಕಿರುಕುಳ ಕೊಡಲು ಮುಂದಾಗುತ್ತಾರೆ. ಮುರುಘೇಂದ್ರರು ಹೋದ ಕಡೆಗಳಲೆಲ್ಲ ಇವರ ದಾಯಾದಿಗಳು ನಡೆಸಿದ ಹಿಂಸೆಗಳಿಗೆ ಅವರು ಒಳಗಾಗುವುದಿಲ್ಲ. ಹಾಗೇನಾದರೂ ಒಂದೊಮ್ಮೆ ಮಾಟ-ಮಂತ್ರ-ಭಾನಾಮತಿಗಳಿಗೆ ಒಳಗಾದರೆ ಕೂಡಲೆ ಎಲ್ಲಿಂದಲೋ ವಿಷಯ ತಿಳಿದು ಹಿರಿಯ ಸಹೋದರ ಮತ್ತು ಗುರುಗಳಾದ ಕರಿಘೂಳೇಶ್ವರರು ಪ್ರತ್ಯಕ್ಷವಾಗಿ ಎಲ್ಲ ಸಮಸ್ಯೆಗಳಿಗೆ ಪರಿಹಾರೋಪಾಯಗಳನ್ನು ದೊರಕಿಸಿಕೊಡುತ್ತಿದ್ದರು.

**೧೩.೧ ಕರ್ಣಕ್ಯಾಟಗಿಯ ಪವಾಡ**

ಗುಲಬರ್ಗಾ ಜಿಲ್ಲೆಯಲ್ಲಿನ ಒಂದು ಹಳ್ಳಿ ಕರ್ಣಕ್ಯಾಟಗಿ. ಈ ಕರ್ಣಕ್ಯಾಟಗಿ ಗ್ರಾಮಕ್ಕೆ ರಾಮಲಿಂಗರು ಮತ್ತು ಮುರುಘೇಂದ್ರ ಸಹೋದರರಿಬ್ಬರು ಆಟ (ಸಣ್ಣಾಟ) ಆಡಲು ಹೋದಾಗ ನಡೆದ ಘಟನೆ ಇದು.

ಅಂದಿನ ದಿನಗಳಲ್ಲಿ ಈ ಗ್ರಾಮ ಮಾಟ-ಮಂತ್ರಗಳಿಗೆ ಪ್ರಸಿದ್ಧಿಯನ್ನು ಪಡೆದಿತ್ತು. ಇಂತಹ ಊರಲ್ಲಿ ಪರ ಊರಿನವರು ಆಟವಾಡುವುದೆಂದರೆ ಸಾವಿನ ಆಟದಲ್ಲಿ ಗೆದ್ದು ಬಳಿಕ ಸಣ್ಣಾಟ ಪ್ರದರ್ಶಿಸಬೇಕಾದದ್ದು ಕರ್ಣಕ್ಯಾಟಗಿಯ ನಿಯಮವೆಂಬಂತೆ ಕಂಡು ಬರುತ್ತಿತ್ತು. ಈ ಊರಿನ ಎಲ್ಲ ವಿಷಯಗಳನ್ನು ಅರಿತ ಸಹೋದರರಿಬ್ಬರು ಒಂದು ದಿನ ಗ್ರಾಮ ಪ್ರವೇಶಿಸಿಯೇ ಬಿಡುತ್ತಾರೆ. ಒಂದೆರಡು ದಿನ ಕಳೆದ ನಂತರ ತಮ್ಮ ಆಟದ ದಿನವನ್ನು ಗೊತ್ತುಪಡಿಸಿಕೊಂಡು ಊರಲ್ಲಿ ಢಂಗುರ ಸಾರುತ್ತಾರೆ. ಇನ್ನೇನು ನಾಳೆ ಸಣ್ಣಾಟ ಪ್ರದರ್ಶನಗೊಳ್ಳಬೇಕಾದರೆ ಹಿಂದಿನ ರಾತ್ರಿ ಇವರ ಪರೀಕ್ಷೆಗಳು ನಡೆಯುತ್ತವೆ.

ಅಡುಗೆ ಮಾಡಲು ರಾತ್ರಿ ಬೆಂಕಿಗಾಗಿ ಊರಿನ ಎಲ್ಲ ಮನೆಗಳ ಬಾಗಿಲು ಬಡಿದರು. ಯಾರು ಬೆಂಕಿಯನ್ನು ನೀಡುವುದಿಲ್ಲ. ಇದೇ ಸರಿಯಾದ ಸಮಯವೆಂದು ಇವರ ಶಕ್ತಿ ನೋಡಬೇಕೆಂದು ಮುದುಕಿಯೊಬ್ಬಳು ಅಡುಗೆಗೆ ಬೆಂಕಿ ಕೊಡಲು ಮುಂದಾಗಿ ಅಲೆದಾಡುತ್ತಿದ್ದ ರಾಮಲಿಂಗರನ್ನು ಕರೆದು

ಮನೆಯೊಳಗೆ ಓಡಿ ಹೋಗಿ ಬೆಂಕಿಯ ತುಂಡೊಂದನ್ನು ತಂದು ಬೆಂಕಿ ತೆಗೆದುಕೊಳ್ಳಿ ಎಂದಳು. ದಿಕ್ಕು ತೋಚದ ರಾಮಲಿಂಗರು ಬೆಂಕಿಯನ್ನು ಒಯ್ಯಲು ಏನು ತಂದಿರುವುದಿಲ್ಲ. ಜೊತೆಗಿದ್ದ ಮುರುಘೇಂದ್ರಸ್ವಾಮಿಗಳು ಉಟ್ಟ ಪಂಚೆಯ ಉಡಿಯೊಳಗೆ ಬೆಂಕಿ ಕೆಂಡವನ್ನು ಹಾಕಿಕೊಂಡು ಹೋಗಿ ಅಡುಗೆ ಮಾಡಿಕೊಂಡು ಉಂಡರು.

ಇವರ ಶಕ್ತಿಯನ್ನು ನೋಡಿ ಮುದುಕಿಯು ನಿಮಗೆ ತೊಂದರೆಗಳಾದರು ಈ ಕರ್ನಾಟ್ಯಾಟಿಗಿಯಲ್ಲಿ ನಿಮ್ಮ ಆಟ ಯಶಸ್ವಿಯಾಗುವುದೆಂದು ನುಡಿಯುತ್ತಾಳೆ. ಅದರಂತೆ ಸಕ್ಯಾಟ ಪ್ರದರ್ಶಿಸಿ ಎಲ್ಲ ವಿರೋಧಿಗಳನ್ನು ಬಗ್ಗು ಬಡಿದು ಮರುಳುತ್ತಾರೆ.

೧೩.೨ ಈರಂಪಲ್ಲಿಯ ಘಟನೆ

ಒಮ್ಮೆ ಮುರುಘೇಂದ್ರರು ಎಲೆರಾಜೋಳ ಗ್ರಾಮದ ಸುತ್ತಲಿನ ಗ್ರಾಮಗಳಲ್ಲಿ ಗೊಂಬೆಯಾಟ ಪ್ರದರ್ಶಿಸುತ್ತಿದ್ದರು. ಸಾಮಾನ್ಯವಾಗಿ ಗೊಂಬೆಯಾಟಗಳಲ್ಲಿ ಪ್ರದರ್ಶಿಸುವ ಗೊಂಬೆಗಳು ಚರ್ಮದಿಂದ ಮಾಡಲ್ಪಟ್ಟು ಅವುಗಳಿಗೆ ದಾರ ಕಟ್ಟಿ ಜನಗಳ ಮುಂದೆ ಆಡಿಸುತ್ತಾರೆ. ಗೊಂಬೆಗಳನ್ನು ಚರ್ಮದಿಂದ ಮಾಡದೇ ಬದಲಾಗಿ ಸಿಗರೇಟು ಡಬ್ಬಿಯ ಒಳಗಿರುವ ಮಿಂಚಿನ ಕಾಗದದಿಂದ ಗೊಂಬೆ ಮಾಡಿ ಯಾರ ಕಣ್ಣಿಗೂ ಕಾಣದ ಒಂದು ತೆಳುವಾದ ದಾರ ಕಟ್ಟಿ ಗ್ರಾಮಸ್ಥರ ಮುಂದೆ ಆಡಿಸುತ್ತಾರೆ. ಜನರ ಕಣ್ಣಿಗೆ ದಾರ ಕಾಣದೆ ಕೇವಲ ಗೊಂಬೆಯೊಂದೇ ಕಂಡು ಅದು ನಿರಾಧಾರವಾಗಿ ಕುಣಿಯುತ್ತಿದೆ ಎಂದು ಭಾವಿಸಿ ಇವರು ಮಾಟ-ಮಂತ್ರ ಮಾಡಿ ಗೊಂಬೆಯನ್ನು ಕುಣಿಸುತ್ತಿದ್ದಾರೆ ಎಂದು ತಪ್ಪಾಗಿ ತಿಳಿದು ಇವರೊಬ್ಬ ಮಾಟ-ಮಂತ್ರ ಮಾಡುವವ ಎಂದು ಜನರು ಸುದ್ದಿ ಹಬ್ಬಿಸುತ್ತಾರೆ. ಕ್ರಮೇಣ ಈ ಸುದ್ದಿ ಎಲ್ಲ ಹಳ್ಳಿಗಳಿಗೆ ಹಬ್ಬುತ್ತದೆ. ಎಲ್ಲೆಂದರಲ್ಲಿ ಇವರ ವಿಷಯವೇ ಕೇಳಿ ಬರುತ್ತಿರುತ್ತದೆ. ಇದರಿಂದ ಇವರು ಗೊಂಬೆಯಾಟ ಆಡುವುದನ್ನು ನಿಲ್ಲಿಸಿ ಮರಳಿ ಎಲೆರಾಜೋಳ ಗ್ರಾಮಕ್ಕೆ ಬರುತ್ತಾರೆ.

ಮುರುಘೇಂದ್ರಸ್ವಾಮಿಗಳು ಈರಂಪಲ್ಲಿ ಗ್ರಾಮಕ್ಕೆ ಬಂದಾಗ, ಕಾಕತಾಳೀಯವೆಂಬಂತೆ ಊರಿನ ಗೌಡರ ಮನೆಯಲ್ಲಿ ಹಾಕಿದ ಬಟ್ಟೆ ಹಾಕಿದಲ್ಲೇ ಸುಡುವುದು, ಊಟ ಮಾಡಿದರೆ ಅನ್ನ ಕರಗದೆ ಕಕ್ಕಸದ ನಾತ ಬರುವುದು. ಕಂಡಕಂಡ ಕಡೆಗಳಲ್ಲೆಲ್ಲ ನಿಂಬೆಹಣ್ಣುಗಳು ಬಿದ್ದಿರುವುದು, ಗೌಡರ ಮತ್ತು ಗ್ರಾಮಸ್ಥರನ್ನು ಭಯವೆಂಬ ಭೂತ ಮನದಲ್ಲಿ ಆವರಿಸಿಕೊಂಡಾಗ, ಇವರನ್ನು ಕಂಡ ಜನರು ಇವನೆ 'ಬೊಮ್ಮಲಾಟವಾಳು' (ತೆಲುಗಿನಲ್ಲಿ) ಈ ಭಾನಾಮತಿಗೆ ಕಾರಣ ಎಂದು ಅವರ ವಿರುದ್ಧ ಗೌಡರಲ್ಲಿ ದೂರು ತೆಗೆದುಕೊಂಡು ಹೋಗುತ್ತಾರೆ. ಊರ ಗೌಡನು ಇವರ ಮಾತು ಕೇಳಿ ಮುರುಘೇಂದ್ರಸ್ವಾಮಿಯೇ ನನ್ನ ಮನೆಗೆ ಭಾನಮತಿ ಮಾಡಿಸಿದ್ದರೆಂದು ಸರಕಾರಕ್ಕೆ ದೂರು ಕೊಡುತ್ತಾನೆ. ಅಷ್ಟರಲ್ಲಿ ವಿಷಯ ತಿಳಿದ ಅಂತರ್‌ಜ್ಞಾನಿ ಕರಿಘೂಳೇಶ್ವರರು ಅಲ್ಲಿಗೆ ಬರುತ್ತಾರೆ. ಎಲ್ಲರನ್ನು ತಿಳಿಸಿ ಹೇಳಬೇಕೆಂಬುದರಲ್ಲಿ ಸರಕಾರದ ಅಮೀನಸಾಬ್ ಬಂದು ಇವರನ್ನು ಕರೆದುಕೊಂಡು ಹೋಗಿ ಕಲಬುರ್ಗಿ ಜೇಲಿಗೆ ಹಾಕುತ್ತಾರೆ.

ಕರಿಘೂಳೇಶ್ವರರು ಮತ್ತು ಮುರುಘೇಂದ್ರರು ಶಿವ ಪರೀಕ್ಷೆ ಎಂದು ತಿಳಿದು ಸುಮಾರು ಮೂರು ತಿಂಗಳು ಕಲಬುರ್ಗಿ ಜೇಲಿನಲ್ಲಿ ಕಳೆಯುತ್ತಾರೆ. ಇನ್ನು ಒಂದು ತಿಂಗಳಾದರೆ ಅವರಿಗೆ ಬಿಡುಗಡೆ ಆಗುವುದಿರುತ್ತದೆ. ಅಷ್ಟರಲ್ಲಿಯೇ ಅಮೀನಾಸಾಬನ ಮಗಳು ಈಗ ಸಾಯುತ್ತಾಳೆ, ಆಗ ಸಾಯುತ್ತಾಳೆ ಎನ್ನುವ ಸ್ಥಿತಿ ತಲುಪಿದ್ದಳು. ಸರಕಾರಿ ಅಧಿಕಾರಿಯಾಗಿದ್ದ ಅಮೀನಸಾಬನಿಗೆ ಸಾಕಷ್ಟು ಸಂಬಳ ಇತ್ತು, ಕೈ ತುಂಬಾ ದುಡ್ಡು ಹರಿಯುತ್ತಿತ್ತು. ಮಗಳಿಗಾಗಿ ಎಲ್ಲ ಕಳೆದುಕೊಳ್ಳಲು ಸಿದ್ಧನಿದ್ದ, ಎಲ್ಲ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಕೊಡಿಸಿದರೂ ಮಗಳಿಗೆ ಗುಣವಾಗಲಿಲ್ಲ ಹಿಡಿದ ಕಾಯಿಲೆಯ ಗುರುತು ಸಿಗಲಿಲ್ಲ. ಇದನ್ನು ಅರಿತ ಕರಿಘೂಳೇಶ್ವರರು ಅಮೀನಾಸಾಬರನ್ನು ಕರೆದು ಕಲಬುರ್ಗಿ ಶರಣಬಸವೇಶ್ವರ ಕೆರೆಯ ನೀರಿನಿಂದ ತನ್ನ ಪಾದ ತೊಳೆದು ಆ ನೀರನ್ನು ತೀರ್ಥ ಎಂಬ ಪವಿತ್ರ ಭಾವನೆಯಿಂದ ನಿನ್ನ ಮಗಳಿಗೆ ಕುಡಿಸು ತಕ್ಷಣವೇ ಎಲ್ಲ ಸರಿಹೋಗುತ್ತದೆ ಎಂದರು.

ಕರಿಘೂಳೇಶ್ವರರ ಆಜ್ಞೆಯಂತೆ ನೀರನ್ನು ತೀರ್ಥವೆಂದು ತಿಳಿದು ಮಗಳಿಗೆ ಕುಡಿಸಿದಾಗ ಮಗಳು ಎದ್ದು ಕುಣಿದಾಡಿದಳು. ಅಷ್ಟರಲ್ಲಿ ಭಾನಾಮತಿ ಮಾಡಿಸಿದ ಮಂತ್ರವಾದಿ ಸೆರೆ ಸಿಕ್ಕುತ್ತಾನೆ ಅಮೀನಾಸಾಬನು ಇರ್ವರ ಕಾಲಿಗೆ ಬಿದ್ದು, ಸತ್ಕರಿಸಿ ಅವರನ್ನು ಎಲೆರಾಜೋಳದವರೆಗೂ ಬಂದು ಬಿಟ್ಟು ಹೋಗುತ್ತಾನೆ. ಈ ಪವಾಡವನ್ನೆಲ್ಲ ತಿಳಿದ ಗ್ರಾಮಸ್ಥರು ಜೈ ಜೈ ಕಾರ ಹಾಕಿದಾಗ ಸಿಟ್ಟಿಲ್ಲದೆ ತಮ್ಮ ಮಕ್ಕಳನ್ನು ಕ್ಷಮಿಸಿ ಭಕ್ತರನ್ನಾಗಿಸಿಕೊಳ್ಳುತ್ತಾರೆ.

**೧೩.೩ ಎಲೆರಾಜೋಳದ ಊರಗೌಡ ಕುಷ್ಠರೋಗಿಯಾಗಿದ್ದು**

ಎಲೆರಾಜೋಳ ಊರಿನ ಗೌಡನಾದ ಬಸವಂತರಾಯನು ಮುರುಘೇಂದ್ರ ಸ್ವಾಮಿಗಳ ಏಳ್ಗೆಯನ್ನು ಸಹಿಸಲಾರದೆ ಅವರ ವಿರುದ್ಧ ಅಪಪ್ರಚಾರ ಮಾಡಲು ಸಿದ್ಧನಾಗಿ ಗುರುಗಳ ಸಿಟ್ಟಿಗೆ ಕಾರಣನಾಗುತ್ತಾನೆ. ಬಸವಂತರಾಯ ಗೌಡನು ಮುರುಘೇಂದ್ರಸ್ವಾಮಿಗಳ ಮೇಲೆ ಇಲ್ಲಸಲ್ಲದ ಆರೋಪಗಳನ್ನು ಹೊರಿಸಿದಾಗ ಮುರುಘೇಂದ್ರಸ್ವಾಮಿಗಳ ಶಿಷ್ಯನಾದ ಮಹಾದ್ವಾರದ ವೆಂಕಟರೆಡ್ಡಿ ಗೌಡರು ಗುರುಗಳ ಪರವಾಗಿ ಬಸವಂತರಾಯ ಗೌಡರನ್ನು ಸರಿಮಾರ್ಗಕ್ಕೆ ತರಲು ಮುಂದಾಗಿ ಬಸವಂತರಾಯ ಗೌಡರನ್ನು ಭೇಟಿಯಾಗಿ ನೀತಿ ಮಾತುಗಳನ್ನು ಹೇಳಲು ಮುಂದಾದರೆ ಊರ ಗೌಡ ಇದಕ್ಕೆ ಒಪ್ಪುವುದಿಲ್ಲ. ಮುರುಘೇಂದ್ರಸ್ವಾಮಿಗಳ ಜೊತೆ ಜಗಳ ತೆಗೆಯಲು ಇದೇ ಸರಿ ಸಮಯವೆಂದು ಮಹಾದ್ವಾರದ ಗೌಡರನ್ನು ಸಿಕ್ಕ ಹಾಗೆ ಬೈಯುತ್ತಾನೆ. ಸುತ್ತಮುತ್ತಲಿನ ಗ್ರಾಮಗಳಿಗೆ ಈ ವಿಷಯ ತಿಳಿದು ಎಲೆರಾಜೋಳ ಗ್ರಾಮದಲ್ಲಿ ಜನ ಸೇರುತ್ತಾರೆ. ಆಗ ಬಸವಂತರಾಯ ಗೌಡ ಈ "ಎಲಿರಾಜೋಳದ ಒಳಗ ಮುರುಘೇಂದ್ರಸ್ವಾಮಿಗಳಿಗೆ ಹೇಳುವರು ಇದ್ದಾಂಗ ಕಾಣ್ಸೋದಿಲ್ಲ, ಹಗಲ ರಾತ್ರಿ ಎಕತಾರಿ ಹಿಡಿದು ಭಜನಿ ಮಾಡಕೋತ ಕುಂತ ನಮ್ಮ ಊರಿನ ಹುಡುಗರ್ಗೆ ತಲಿ ಕೆಡಿಸಿಬಿಟ್ಟಾರ, ಇದರಿಂದ ಅಡವಿಗಿ ಹೋಗೋ ಹುಡಗರ್ಗಿ ಹಿಡ್ದಿ ದಮಡಿ ಕೊಟ್ಟು ಹಾಡ್ಲಿಕ್ಕೆ ಹಚ್ಚಿದರ ಯಾರ ಬಾಳ್ವೇ ಹಾಳೂಗುತ್ತೆ ಅನ್ನುವ ವಿಚಾರ ಅವ್ರಿಗ್ಯಾಂಗ

ಗೊತ್ತಾಗಬೇಕು. ನಾನು ಅವರ ಶಿಷ್ಯನೇ ಇದ್ರು ಅವರ ಕಡೆ ಹೋಳ್ಳಿ ನೋಡಿಲ್ಲ, ಬರಲಿ ಇವತ್ತ ಕೇಳೇ ಬಿಡ್ತೀನಿ"[೫] ಅಷ್ಟರಲ್ಲಿ ಮುರುಘೇಂದ್ರಸ್ವಾಮಿಗಳು ಜನ ಸೇರಿದ ಸ್ಥಳಕ್ಕೆ ಬಂದು ಬಸವಂತರಾಯ ಗೌಡನನ್ನು ವಿಚಾರಿಸುತ್ತಾರೆ. ಮತ್ತೇ ತನ್ನ ವಾಗ್ಧಾಳಿ ಮುಂದುವರೆಸಿದ ಗೌಡರು "ನಮ್ಮ ವೀರಶೈವ ಧರ್ಮದಾಗ ಶರಿ ಹೆಂಡಾ ಕುಡಿಯೋದ ಐತ್ಯಾ?"[೬] ನಿಮ್ಮಿಂದ ನಮ್ಮ ಊರಾಗ ಕುಡಕರ ಹಾವಳಿ ಹೆಚ್ಚಾಗ್ಯಾದ, ಎಂದು ಕೂಗಾಡಿದ ಇವನ ಆರ್ಭಟವನ್ನು ನೋಡಿದ ಮುರುಘೇಂದ್ರಸ್ವಾಮಿ ಮೌನವಾಗಿದ್ದು ಏನೋ ಆಲೋಚನೆಯಲ್ಲಿ ಮುಳಗಿದರು.

ಅಷ್ಟರಲ್ಲಿ ಮತ್ತೇ ಬಸವಂತರಾಯ ಗೌಡ "ತಾವು ಶರಣರಾಗಿ ಮದವಿ ಮಾಡಿಕೊಂಡು ಮತ್ತ ಪ್ರಪಂಚದ ಕಡಿಗಿ ಹೊಳ್ಳಿ ನೋಡಬೇಕ?"[೭] ಎಂಬುದಾಗಿ ಹರಟುತ್ತಲೆ ಇದ್ದ ಮುರುಘೇಂದ್ರಸ್ವಾಮಿಗಳು ಈತನ ಪಾಪದ ಕೊಡ ತುಂಬಿದ ತಕ್ಷಣ ಮನದಲ್ಲೇ ನಿನಗೆ ವಾರ ಕಳೆಯುವುದರೊಳಗೆ ಕುಷ್ಠ ರೋಗ ಬರಲಿ ಎಂದು ತಮ್ಮ ಕರಿನಾಲಿಗೆಯಿಂದ ನುಡಿದರು.

ಒಂದು ವಾರ ಇನ್ನೂ ಮುಗಿದಿರಲಿಲ್ಲ ಬಸವಂತರಾಯ ಗೌಡರಿಗಷ್ಟೇ ಅಲ್ಲ ಆತನ ಹೆಂಡತಿಗೂ ಕುಷ್ಠರೋಗ ತಗುಲಿತ್ತು. ಬಸವಂತರಾಯ ತಾನು ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪ ಪಟ್ಟು "ತಂದೇ ಮುರುಘೇಂದ್ರ ಶಿವಯೋಗಿ ನನ್ನಧಿಕಾರದ ಮದದಲ್ಲಿ ನಿನ್ನ ಮಹಾತ್ಮೆಯನ್ನರಿಯದೆ ಕೆಟ್ಟೆ! ಶಿವ ಭಜನೆ ಮಾಡುವ ಭಕ್ತರಿಗೆ ಬಿರುನುಡಿಗಳಾಡಿ ಕೆಟ್ಟೆ, ನಿನ್ನ ದರುಶನಕ್ಕಾಗಿ ಓಡೋಡಿ ಬರುವ ಶಿಷ್ಯ ವೃಂದಕ್ಕೆ ಜರಿದು ಕೆಟ್ಟೆ, ನನಗೀಗ ಎಲೆರಾಜೋಳಿಯಲ್ಲಿ ಯಾರು ಮಾತಾಡುವುದು ಒತ್ತಟ್ಟಿಗಿರಲಿ, ಊರೊಳಗೆ ಸಹ ಬರಗೊಡುತ್ತಿಲ್ಲ. ನನ್ನ ಹೆಂಡತಿಗೂ ಮಾತು ಬಿದ್ದು ಮೂಕಳಾಗಿದ್ದಾಳೆ. ದಯಾನಿಧಿ, ಕರುಣಾಸಾಗರ, ಕರುಣೆ ಮಾಡು ನನ್ನಪ್ಪಾ ನೀನೊಲಿದರೆ ಕೊರಡು ಕೊನರುವುದು, ಬರಡು ಹಯನಾಗುವುದು, ವಿಷ ಅಮೃತವಾಗುವುದು, ನೀನೊಲಿದರೆ ಏನುಂಟು ಏನಿಲ್ಲ;"[೮]

ಇಷ್ಟೆಲ್ಲ ವಿನಂತಿಸಿದ ಮೇಲೆ ದಯಾಳುಗಳಾದ ಮುರುಘೇಂದ್ರಸ್ವಾಮಿಗಳು ಮಹಾದ್ವಾರದ ವೆಂಕಟರೆಡ್ಡಿ ಗೌಡರ ಎದುರಿನಲ್ಲಿ ಬಸವಂತರಾಯ ಮತ್ತು ಆತನ ಪತ್ನಿಯ ಶಾಪ ವಿಮೋಚನೆ ಮಾಡುತ್ತಾರೆ. ಬಸವಂತರಾಯ ಗೌಡರು ಯಥಾಸ್ಥಿತಿಗೆ ಮರಳಿ ಊರು ಪ್ರವೇಶ ಮಾಡಿ ಶರಣರಂತೆ ಬದುಕು ಸಾಗಿಸುತ್ತಾರೆ.

### ೧೩.೪ ಗುರು ಶಂಕರಾರಾಧ್ಯರ ಆಜ್ಞೆ ಮೀರಿದ್ದು

ಕರಿಘೂಳೇಶ್ವರರಿಗೆ ಗುರುಗಳಾದ ವಿಶ್ವರಾರಾಧ್ಯರು ಗುರುಬೋಧನೆ ನೀಡುವ ಪೂರ್ವದಲ್ಲಿ ಮೂವರು ಬಾಲಕರ ಹಸ್ತಗಳನ್ನು ನೋಡಿ ಹೆದರಿ ಅವರಿಗೊಂದು ನಿಜ ಸಂಗತಿ ಹೇಳಿದ್ದರು, 'ಮುಂದಿನ ನಿಮ್ಮ ಜೀವನದಲ್ಲಿ ಒಮ್ಮೆಯಾದರೆ ಮೂವರು ಸಹೋದರರು ಒಂದೇ ಕಡೆ ಕಲಿತರೆ ನಿಮಗೆ ದುರ್ಘಟನೆಗಳು ಸಂಭವಿಸುತ್ತವೆಯೆಂದು' ಎಚ್ಚರಿಕೆ ನೀಡಿ ಸಹೋದರರೆಲ್ಲರಿಂದಲೂ ಇದಕ್ಕಾಗಿ ವಚನ ತೆಗೆದುಕೊಂಡಿದ್ದರು.

ಗುರುಗಳ ಆಜ್ಞೆಯಂತೆ ತ್ರಿಮೂರ್ತಿ ಸಹೋದರರು ಮುಂದೆ ಎಲ್ಲಿಯೂ ಒಟ್ಟಿಗೆ (ಮೂವರು) ಸಂದಿಸುವುದೇ ಇಲ್ಲ. ತಂದೆ ಶರಣಯ್ಯ ಸ್ವಾಮಿಗಳು ದೈವಾಧಿನರಾದಾಗಲೂ ಒಟ್ಟಿಗೆ ಮಕ್ಕಳು ಮಣ್ಣು ಕೊಡಲಿಲ್ಲ, ತಂದೆಯ ಅಂತಿಮ ದರ್ಶನಕ್ಕೆ ಮೊದಲು ಕರಿಘೂಳೇಶ್ವರ ಬಂದರೇ ತದನಂತರ ಅಲ್ಲಿಂದ ಕರಿಘೂಳೇಶ್ವರ ನಿರ್ಗಮಿಸಿದ ಮೇಲೆಯೆ ರಾಮಲಿಂಗ ಮತ್ತು ಮುರುಘೇಂದ್ರಸ್ವಾಮಿಗಳು ಅಲ್ಲಿಗೆ ಬಂದಿದ್ದರು.

ಮುಂದೊಂದು ದಿನ ಮುರುಘೇಂದ್ರಸ್ವಾಮಿಗಳ ಪ್ರೀತಿಯ ಶಿಷ್ಯನಾದ ಮಹಾದ್ವಾರದ ವೆಂಕಟರೆಡ್ಡಿ ಗೌಡನಿಂದ ವಿಧಿ ತನ್ನ ಪವಾಡವನ್ನು ಮಾಡಿಸುತ್ತದೆ. ವೆಂಕಟರೆಡ್ಡಿ ಗೌಡನಿಗೆ ಯೌವನ ಮೀರಿದರೂ ಮಕ್ಕಳಾಗಿರಲಿಲ್ಲ ಮುರುಘೇಂದ್ರಸ್ವಾಮಿಗಳ ಆಶೀರ್ವಾದದಿಂದಲೇ ವೆಂಕಟರೆಡ್ಡಿ ಗೌಡರಿಗೆ ಗಂಡು ಮಗು ಹುಟ್ಟಿತು. ಅದಕ್ಕೆ ಗೌಡರು 'ಗುರುಪ್ರಸಾದ' ಎಂದೇ ಹೆಸರಿಟ್ಟರು.

ಗೌಡರಿಗೆ ಬಹಳ ದಿನದಿಂದ ಮನದಲ್ಲಿ ಒಂದು ಆಸೆ ಕೊರೆಯುತ್ತಿತ್ತು. ಈ ನಮ್ಮ ಮಹಾದ್ವಾರದ ಊರಲ್ಲಿ ವೈರಾಗ್ಯ ಚಕ್ರವರ್ತಿ ಕರಿಘೂಳೇಶ್ವರ, ಅವಧೂತ ರಾಮಲಿಂಗ, ವರಕವಿ ಮುರುಘೇಂದ್ರಸ್ವಾಮಿ-ಮೂವರು ಸಹೋದರರನ್ನ ಒಟ್ಟಿಗೆ ಒಂದೇ ವೇದಿಕೆಯ ಮೇಲೆ ಕುಳ್ಳರಿಸಿ ತ್ರಿಮೂರ್ತಿಗಳ ದಿವ್ಯ ಚೇತನದ ರೂಪವನ್ನು ಎಲ್ಲ ಭಕ್ತರಿಗೆ ತೋರಿಸಬೇಕೆಂದು ಆಸೆಪಟ್ಟ.

ತ್ರಿಮೂರ್ತಿಗಳ ಸಂಗಮದಿಂದ ಅನಾಹುತ ಆಗುತ್ತದೆಂದು ತಿಳಿದರು. ದೇವರು ಭಕ್ತರನ್ನು ಕಾಡಿಸುವುದಿಲ್ಲವೆಂದು ಕೊನೆಗೆ ತ್ರಿಮೂರ್ತಿಗಳಿಂದ ಮಹಾದ್ವಾರ ಗ್ರಾಮದಲ್ಲಿ ಒಟ್ಟಿಗೆ ದರ್ಶನಾಶೀರ್ವಾದ ಪಡೆಯಲು ತೀರ್ಮಾನಿಸಿದ, ಮುರುಘೇಂದ್ರಸ್ವಾಮಿಗಳಿಗೆ ಗೌಡರ ಮನದ ಆಸೆ ತಿಳಿದು "ವೆಂಕಟರೆಡ್ಡಿ! ಇಂದು ನೀನೆಂಥಾ ಕಾರ್ಯಕ್ಕೆ ಕೈಹಾಕಿರುವಿಯಲ್ಲೋ, ಮೂವರಿಗೆ ಕೂಡಿಸುವ ಪ್ರಯತ್ನ ಮಾಡಬ್ಯಾಡ್ರಿ ಅಂತ ಪರ್ವಾತಾಬಾದಿನ ಶಾಂತಪ್ಪಸಬಸೆಟ್ಟೆ ಮುಂದ ಹೇಳಿದ್ದನಲ್ಲಾ,"[೯] ಎಂದು ಹೇಳುತ್ತಿದ್ದಂತೆಯೇ ಕರಿಘೂಳೇಶ್ವರರು, ರಾಮಲಿಂಗರು ಅಲ್ಲಿಗೆ ಬಂದರು.

ಮೂವರು ಸಹೋದರ ದಿವ್ಯ ದರ್ಶನ ಪಡೆದ ಭಕ್ತರೆಲ್ಲರು

"ವೈರಾಗ್ಯ ಶ್ರೀ ಕರಿಘೂಳೇಶ್ವರ ಮಹಾರಾಜಕಿ ಜೈ
ಅವಧೂತ ಶ್ರೀ ರಾಮಲಿಂಗೇಶ್ವರ ಮಹಾರಾಜಕಿ ಜೈ
ವರಕವಿ ಶ್ರೀ ಮುರುಘೇಂದ್ರ ಶಿವಯೋಗೀಶ್ವರ ಮಹಾರಾಜಕಿ ಜೈ"[೧೦]

ಮೂವರು ಸಹೋದರರನ್ನು ಆಸನಗಳ ಮೇಲೆ ಕೂಡಿಸಿ "ಮಹಾದ್ವಾರಕ್ಕೆ ಬಂದ ಸವಿ ನೆನಪಿಗೆ ನಿಮ್ಮ ಫೋಟೊ ತೆಗಿಸಬೇಕು ಅಂತ...."[೧೧] ಫೋಟೊ ತೆಗಿಸಿಯೇ ಬಿಡುತ್ತಾನೆ. ಅಷ್ಟರಲ್ಲಿ ರಾಮಲಿಂಗರು ಈ ಭೂಮಿಯ ಮೇಲೆ ತಮ್ಮ ಕೊನೆಯ ದಿನ ಎಂದು ತಿಳಿದು ಅಣ್ಣನನ್ನು ಕುರಿತು "ಗುರುವೇ ನಮಗೆ ಅಪ್ಪಣೆ ಸಿಕ್ಕಿತು"[೧೨] ಎಂದು ತನ್ನ ಕೊನೆಯ ಗಳಿಗೆ ಎಣಿಸುತ್ತಿದ್ದಾಗ ಕಿರಿಯ ತಮ್ಮನಾದ

ಮುರುಘೇಂದ್ರನ ಕುರಿತು "ನಾನೇ ಶರಣಮ್ಮ ಎಂಬ ನಾಮ ಹೊತ್ತು, ನಿನ್ನ ಮಗಳಾಗಿ ಅವತರಿಸುತ್ತೇನೆ. ಯಾಕೆಂದರೆ, ಈ ಜನ್ಮದಲ್ಲಿ ಅರ್ಧನಾರೇಶ್ವರನಾಗಿ ಜಗ ತಿರುಗಿದೆ, ಇನ್ನೂ ಈ ಹಂಬಲ ತೀರಿಲ್ಲ, ಕಾರಣ ಮುಂದಿನ ಜನ್ಮದಲ್ಲಿ ಹೆಣ್ಣಾಗಿ ಹುಟ್ಟಿ ಧರೆಯ ಭೋಗವನ್ನುಂಡು ನಿಮ್ಮಿರ್ವರ ಪೂಜೆ ಮಾಡುವೆ. ನಾನು ಅವತರಿಸಿ ಬರುವ ಲಕ್ಷಣಗಳು ದೇಹದ ಎಡಭಾಗಕ್ಕೆ ಮಚ್ಚೆ ಇರುತ್ತದೆ. ಅಲ್ಲದೆ ಮುಗ್ಧ ಸ್ವಭಾವ"[೧೩] ಇಷ್ಟೆಲ್ಲ ತನ್ನ ಮುಂದಿನ ಜನ್ಮದ ಕುರುಹುಗಳನ್ನು ಹೇಳಿದ ಅವಧೂತ ರಾಮಲಿಂಗರೂ ಲಿಂಗೈಕ್ಯರಾಗಿ ಅವರು ಹೇಳಿದಂತೆ ಇದ್ದು ಮುರುಘೇಂದ್ರಸ್ವಾಮಿಗಳ ಒಬ್ಬಳೇ ಮಗಳಾಗಿ ಹುಟ್ಟಿದ್ದಾರೆ.

## ೧೪. ಮುರುಘೇಂದ್ರಸ್ವಾಮಿಗಳ ಶಿಷ್ಯರು

೧. ಹಂಗನಳ್ಳಿಯ ವಳಕುಂದಿ ಬಸವಂತರಾಯ ಮತ್ತು ಅವರ ಮಗ ಶರಣಪ್ಪ

೨. ಹಂಗನಳ್ಳಿಯ ಪೋಲಿಸ ಬಸವಂತರಾಯ ಗೌಡ

೩. ನಾಚವಾರದ ಗೋವಿಂದರೆಡ್ಡಿ, ಗುರುನಾಥರೆಡ್ಡಿ, ಮಕ್ಕಯ್ಯಸ್ವಾಮಿ, ಮಲ್ಲನಗೌಡ

೪. ಸಿದ್ಧಾಪುರದ ನರಸಪ್ಪಾ ಸಾಧು

೫. ದುಗನೂರ ಬುಗ್ಗಯ್ಯ

೬. ಅರಿಕೇರಿ ಜಂಬಯ್ಯ ಸಾಧು

೭. ದ್ಯಾವನೂರಿನ ಸಂಗಾರೆಡ್ಡಿ ಮತ್ತು ಅವರ ಹೆಂಡತಿ ಅನಂತಮ್ಮ ಗೌಡತಿ

೮. ಭೀಮಣ್ಣ ಕಟ್ಟಿಮನಿ, ಯಾದಗಿರಿ

೯. ರಾಜೋಟಿವೀರ ಸ್ವಾಮಿ ವಿಮಲಾಪುರ

೧೦. ಬಾಬಯ್ಯ

ಇವರಲ್ಲಿ ಸಿದ್ಧಾಪುರದ ನರಸಪ್ಪಾ ಸಾಧು 'ನರಸೇಶ್ವರ' ಎಂಬ ಅಂಕಿತದಲ್ಲಿ ತತ್ವಪದಗಳನ್ನು ರಚಿಸಿದ್ದಾನೆ.

## ೧೫. ಮುರುಘೇಂದ್ರಸ್ವಾಮಿಗಳ ಕೊನೆ ದಿನಗಳು

ಮುರುಘೇಂದ್ರಸ್ವಾಮಿಗಳು ತಮ್ಮ ಕೊನೆಯ ದಿನಗಳನ್ನು ನೋವಿನಿಂದ ಕಳೆದರು, ಅವರು ದೈಹಿಕವಾಗಿ ನೋವು ಅನುಭವಿಸದೆ, ಮಾನಸಿಕವಾಗಿ ಬಹಳ ನೊಂದಿದ್ದರು. ಮುರುಘೇಂದ್ರಸ್ವಾಮಿಗಳ ಆರೋಗ್ಯ ಕ್ಷೀಣಿಸುವ ಸಮಯ ಬಂದಾಗ ಅವರ ಶಿಷ್ಯಂದಿರಲ್ಲಿ ಗುರುಗಳ ಸಮಾಧಿ ಎಲ್ಲಿ ನಿರ್ಮಾಣ ಮಾಡಬೇಕೆಂಬ ಪ್ರಶ್ನೆ ಉದ್ಭವವಾಯಿತು. ಮುರುಘೇಂದ್ರಸ್ವಾಮಿಗಳಂತಹ ಸಿದ್ಧಿ ಪುರುಷರ, ಪವಾಡ ಪುರುಷರ

ಸಮಾಧಿ ತಮ್ಮ ತಮ್ಮ ಊರಲ್ಲಿ ಆಗಬೇಕೆಂದು ಶಿಷ್ಯಂದಿರೆಲ್ಲ ಪಟ್ಟು ಹಿಡಿದರು. ಮುರುಘೇಂದ್ರಸ್ವಾಮಿಗಳ ಸಮಾಧಿ ತಮ್ಮ ಊರಿನಲ್ಲಾದರೆ ಅವರ ಪುಣ್ಯ ನಮಗೆ ದಕ್ಕುತ್ತದೆಂಬ ಅಚಲವಾದ ನಂಬಿಕೆ ಅವರಲ್ಲಿತ್ತು.

ಮುರುಘೇಂದ್ರಸ್ವಾಮಿಗಳ ಅತೀ ಪ್ರಮುಖ ಶಿಷ್ಯರಲ್ಲಿ ಭೀಮಣ್ಣ ಕಟ್ಟಿಮನಿಯವರು ಒಬ್ಬರು. ಇವರು ಯಾದಗಿರಿಯಲ್ಲಿ ಇರುತ್ತಿದ್ದು ತಮ್ಮ ನಡುವಯಸ್ಸಿನಲ್ಲಿ ಮುರುಘೇಂದ್ರಸ್ವಾಮಿಗಳ ಶಿಷ್ಯರಾಗಿ ಅನೇಕ ಸಲ ಗುರುಗಳನ್ನು ಯಾದಗಿರಿಗೆ ಕರೆದುಕೊಂಡು ಬಂದು ಭಕ್ತರಿಗೆ ಆಶೀರ್ವಚನ ನೀಡುವಂತೆ ಏರ್ಪಾಡು ಮಾಡುತ್ತಿದ್ದರು. ಯಾದಗಿರಿಯಲ್ಲಿ ಒಂದು ಗುಡಿ ಕಟ್ಟಿ ಹಬ್ಬ ಹರಿದಿನಗಳಲ್ಲಿ ಭಜನೆಯನ್ನು ಮಾಡಲಾಗುತ್ತಿತ್ತು. ಯಾದಗಿರಿ ದೊಡ್ಡ ಕೇಂದ್ರವಾಗಿರುವುದರಿಂದ ಮುರುಘೇಂದ್ರಸ್ವಾಮಿಗಳ ಹೆಸರು ಇನ್ನು ಪ್ರಸಿದ್ಧವಾಗಬೇಕೆಂದು ಯಾದಗಿರಿಯಲ್ಲಿಯೇ ಗುರುಗಳ ಸಮಾಧಿ ನೆರವೇರಬೇಕೆಂದು ಪಟ್ಟು ಹಿಡಿಯುತ್ತಾನೆ. ಉಳಿದ ಶಿಷ್ಯರೆಲ್ಲರು ಇದನ್ನು ವಿರೋಧಿಸಿ ಎಲೆರಾಜೋಳ ಗ್ರಾಮದಲ್ಲಿ ನೆಲೆ ನಿಂತದ್ದರಿಂದ ಅಲ್ಲಿಯೇ ಮುರುಘೇಂದ್ರ ಸ್ವಾಮಿಯ ಸಮಾಧಿ ಸಿದ್ಧಗೊಳ್ಳಬೇಕೆಂದು ನಿರ್ಧಾರ ತೆಗೆದುಕೊಳ್ಳುತ್ತಾರೆ.

ಈ ಮಧ್ಯೆ ಮುರುಘೇಂದ್ರಸ್ವಾಮಿಗಳು ಗೌರಿ ಹುಣ್ಣಿಮೆಯ ಸೋಮವಾರದಂದು ಲಿಂಗೈಕ್ಯರಾಗುತ್ತಾರೆ. ಮುರುಘೇಂದ್ರ ಸ್ವಾಮಿಗಳ ಮಗಳು ಶರಣಮ್ಮನವರ ಸಮ್ಮುಖದಲ್ಲಿ ಅಂತಿಮ ಕಾರ್ಯ ನೆರವೇರಿಸಲು ಸಿದ್ಧತೆ ನಡೆದಾಗ ಯಾದಗಿರಿಯ ಭೀಮಣ್ಣ ಕಟ್ಟಿಮನಿಯವರು ಯಾದಗಿರಿಯ ಜನರೊಡನೆ ಬಡಗಿ-ಕೊಡಲಿಗಳನ್ನು ಹಿಡಿದುಕೊಂಡು ಎಲೆರಾಜೋಳ ಗ್ರಾಮದಿಂದ ಮುರುಘೇಂದ್ರಸ್ವಾಮಿಯ ಶರೀರವನ್ನು ಬಲವಂತವಾಗಿ ತೆಗೆದುಕೊಂಡು ಹೋಗಲು ಬಂದಾಗ, ಶರಣಮ್ಮನವರ ನೇತೃತ್ವದಲ್ಲಿ ಎಲೆರಾಜೋಳದ ಗ್ರಾಮಸ್ಥರೆಲ್ಲರು ಭೀಮಣ್ಣ ಕಟ್ಟಿಮನಿಯವರನ್ನು ಎದುರಿಸಿದಾಗ ವಿಧಿಯಿಲ್ಲದೆ ಸೋತು, ಭೀಮಣ್ಣ ಕಟ್ಟಿಮನಿಯವರು ಎಲೆರಾಜೋಳದಲ್ಲಿಯೇ ಮುರುಘೇಂದ್ರಸ್ವಾಮಿಗಳ ಸಮಾಧಿ ಆಗಲೆಂದು ಒಲ್ಲದ ಮನಸ್ಸಿನಿಂದ ಒಪ್ಪುತ್ತಾನೆ.

ಮುರುಘೇಂದ್ರಸ್ವಾಮಿಗಳು ಲಿಂಗೈಕ್ಯರಾಗಿ ಇಂದಿಗೆ ಇಪ್ಪತ್ತನಾಲ್ಕು ವರ್ಷಗಳು ಗತಿಸಿವೆ. ಇಲ್ಲಿನ ಜನರು ಅವರು ಹಾಕಿಕೊಟ್ಟ ಮಾರ್ಗದಲ್ಲಿಯೇ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಪ್ರತಿ ಚಟ್ಟಿ ಅಮವಾಸ್ಯೆಯಂದು ಅತೀ ವಿಜೃಂಭಣೆಯಿಂದ ಮುರುಘೇಂದ್ರಸ್ವಾಮಿಗಳ ಉತ್ಸವ (ಜಾತ್ರೆ) ಆಚರಿಸುತ್ತಾರೆ.

### ೧೬. ಮುರುಘೇಂದ್ರಸ್ವಾಮಿಯ ಗುಡಿಗಳು

ಮುರುಘೇಂದ್ರಸ್ವಾಮಿಗಳ ಗುಡಿಗಳು ಅನೇಕ ಗ್ರಾಮಗಳಲ್ಲಿ ಕಂಡುಬರುತ್ತವೆ. ಅವುಗಳಲ್ಲಿ

೧. ಎಲೆರಾಜೋಳ (ಮುರುಘೇಂದ್ರಸ್ವಾಮಿಯ ಸಮಾಧಿ ಸ್ಥಳ)

೨. ನಾಚವಾರ

೩. ಯಾದಗಿರಿ

೪. ಹತ್ತಿಕುಣಿ

೫. ಯರಗೋಳ

### ೧೭. ಹಿರಿಯ ಅಣ್ಣನಾದ ಕರಿಘೂಳೇಶ್ವರ

ಮುರುಘೇಂದ್ರರಿಗೆ ಹಿರಿಯ ಅಣ್ಣನೆ ಗುರುವಾಗಿದ್ದರಿಂದ ಅವರ ವಿಷಯವು ಪ್ರಸ್ತಾಪಿಸಲೇಬೇಕಾಗುತ್ತದೆ.

"ವಿಶ್ವಚೇತನ ಶ್ರೀ ಕರಿಘೂಳೇಶ್ವರಾ
ನುಡಿ ಎಡೆಯನು ಮಾಡಿ ನಿಂತಿಹೆವು ಶ್ರೀಹರ
ಕರುಣೆಯಿಂದ ವರ ನೀಡೋ ಗುರುವರಾ
ಅಘಹರ, ಭವದೂರ, ನತಜನ ಮಂದಾರ"[೧೪]

ಕರಿಘೂಳೇಶ್ವರರು ಜನಪದ ಸಾಹಿತ್ಯ ಮತ್ತು ಶಿಷ್ಟ ಸಾಹಿತ್ಯಕ್ಕೆ ನೇರವಾದ ಕೊಡುಗೆಗಳನ್ನು ಕೊಡದಿದ್ದರು ಪರೋಕ್ಷವಾಗಿ ತಮ್ಮ ಸೇವೆಯನ್ನು ನೀಡಿದ್ದಾರೆ. ಶರಣಯ್ಯ ಮತ್ತು ಬಸಲಿಂಗಮ್ಮನವರ ಹಿರಿಯ ಮಗನಾಗಿ ಜನಿಸಿದ ಕರಿಘೂಳೇಶ್ವರರು ವೈರಾಗ್ಯ ಚಕ್ರವರ್ತಿ ಎಂದೇ ಶರಣರ ನಾಡಿನಲ್ಲಿ ಪ್ರಸಿದ್ಧರಾಗಿದ್ದರು. ತಂದೆಯೊಂದಿಗೆ ಗೌಡಗಾಂವ ಗ್ರಾಮ ಬಿಟ್ಟು ಬಾಲ್ಯದಲ್ಲಿ ರಾಯಚೂರನ್ನು ಪ್ರವೇಶಿಸಿ ತಮ್ಮ ಬಾಲ್ಯವನ್ನು ಇಲ್ಲಿಯೇ ಕಳೆದರು.

ಬಾಲ್ಯದಲ್ಲಿಯೇ ಕಾಯಕಕ್ಕೆ ಮಹತ್ವ ಕೊಟ್ಟು ದೇಹವನ್ನು ದಂಡಿಸಿದರು. ಶಂಕರಾರಾಧ್ಯರಿಂದ ಗುರು ಬೋಧನೆ ಪಡೆದು ಆಧ್ಯಾತ್ಮ ಜೀವನವನ್ನು ತಮ್ಮದಾಗಿಸಿಕೊಂಡು ರಾಮಲಿಂಗ ಮತ್ತು ಮುರುಘೇಂದ್ರರಿಗೆ ಗುರುಗಳಾಗಿ ತಮ್ಮ ಗುರುಗಳಿಂದ ಬಂದ ಮತ್ತು ತಾವು ಸಾಧಿಸಿದ ಎಲ್ಲ ಜ್ಞಾನವನ್ನು ಸಹೋದರ ಶಿಷ್ಯರಿಗೆ ಧಾರೆ ಎರೆದು ಅವರನ್ನು ಜನ ಸಾಮಾನ್ಯರ ಬದುಕಿನಲ್ಲಿ ಬೆರೆಯುವಂತೆ ಮಾರ್ಪಡಿಸುತ್ತಾರೆ. ಜ್ಞಾನ ದೀಕ್ಷೆಯ ಮೇರೆಗೆ ಲಿಂಗಾಂಗ ಸಾಮರಸ್ಯದ ಕುರಿತು ಬೋಧನೆ ಮಾಡುವ ಕೆಲಸ ಕರಿಘೂಳೇಶ್ವರರು ಆರಂಭಿಸುತ್ತಾರೆ.

ಕರಿಘೂಳೇಶ್ವರರು ಪೂಜೆ, ತಪಸ್ಸು, ಅನುಷ್ಠಾನ ಮಾಡುವಾಗ ನೆಲದಿಂದ ನಾಲ್ಕು ಅಡಿ ಮೇಲೆ ನಿರಾಧಾರವಾಗಿ ಕುಳಿತುಕೊಳ್ಳುತ್ತಿದ್ದರಂತೆ, ಭವಿಷ್ಯ ಹೇಳುವುದರಲ್ಲಿ ಸಿದ್ಧಹಸ್ತರಾದ ಇವರು ಮುಂದೆ ನಡೆಯುವುದನ್ನು ಹೇಳುತ್ತಿದ್ದರು. ನಡುವಯಸ್ಸಿನಲ್ಲಿ ಎಲ್ಲಿಯೂ ನೆಲೆ ನಿಲ್ಲದೆ ಲೋಕ ಸಂಚಾರದಲ್ಲಿ ತಮ್ಮ ಜೀವನವನ್ನು ಕಳೆದು, ಅನೇಕ ಕಡೆಗಳಲ್ಲಿ ಪವಾಡ, ಮಾಟ, ಮಂತ್ರಗಳನ್ನು ಮಾಡಿ ಭಕ್ತರ ಮೇಲೆ ತಮ್ಮ ಪ್ರಭಾವ ಬೀರಿದ್ದರು.

ಕರಿಘೂಳೇಶ್ವರರಿಂದ ಜ್ಞಾನ ಪಡೆದ ಸಹೋದರರು ಧರ್ಮದ ಮಾರ್ಗದಲ್ಲಿಯೇ ನಡೆದು ತಮ್ಮ ಸಾಹಿತ್ಯಗಳಲ್ಲಿ ಅವರ ವಿಚಾರಗಳನ್ನು ಬರೆದು ಕರಿಘೂಳೇಶ್ವರರ ಸಂದೇಶವನ್ನು ಜನಸಾಮಾನ್ಯರಿಗೆ

ತಲುಪಿಸಿದರು. ಕರಿಘೂಳೇಶ್ವರರು ಸನ್ಯಾಸಿಯಾಗಿದ್ದು ಸಂಸಾರದಲ್ಲಿದ್ದುಕೊಂಡು ಸಿದ್ದಿಯನ್ನು ಸಾಧಿಸಲು ಸಾಧ್ಯವಿಲ್ಲ ಎಂಬ ಕಾರಣದಿಂದ ಸಂಸಾರದ ಕುದುರೆ ಏರಲಿಲ್ಲ.

ಅನ್ಯ ಧರ್ಮಗಳೆನ್ನದೆ ಎಲ್ಲ ಧರ್ಮದವರನ್ನು ಸಮಾನ ದೃಷ್ಟಿಯಿಂದ ಕಂಡ ಕರಿಘೂಳೇಶ್ವರರು ಅಪಾರವಾದ ಶಿಷ್ಯ ಸಂಪತ್ತನ್ನು ಗಳಿಸಿದ್ದರು. ಅನೇಕ ಪವಾಡಗಳನ್ನು ಮೆರೆದ ಕರಿಘೂಳೇಶ್ವರರು ತಮ್ಮ ಕೊನೆಯ ದಿನಗಳನ್ನು ಕಲಬುರ್ಗಿ ಹತ್ತಿರವಿರುವ ಫರತಾಬಾದ್‌ನಲ್ಲಿ ಕಳೆದು ಅಲ್ಲಿಯೇ ಲಿಂಗೈಕ್ಯರಾದರು. ಇವರಿಂದ ಪಡೆದ ಜ್ಞಾನವನ್ನು ರಾಮಲಿಂಗ ಮತ್ತು ಮುರುಘೇಂದ್ರಸ್ವಾಮಿಗಳು ಜನರಿಗೆ ಧಾರೆ ಎರೆದಿದ್ದಾರೆ. ಇಬ್ಬರು ಸಹೋದರರು ತಮ್ಮ ಸಾಹಿತ್ಯ ಮತ್ತು ಅನುಭವ ಪದಗಳಲ್ಲಿ "ಕರಿಘೂಳೇಶ್ವರ" ಎಂಬ ಅಂಕಿತವನ್ನು ಬಳಸಿ ಅವರ ಹೆಸರನ್ನು ಶಾಶ್ವತವಾಗಿಸಿದ್ದಾರೆ.

ಕರಿಘೂಳೇಶ್ವರರು ಅಪಾರ ಸ್ನೇಹಿತರನ್ನು, ಶಿಷ್ಯರನ್ನು ಹೊಂದಿದ್ದರು. ಅವರಲ್ಲಿ ಬನ್ನೂರು ಶಂಕ್ರಪ್ಪ, ಭೂಪಾಲ ತೆಗನೂರಿನ ಕಾಶೀರಾಯ ಸ್ವಾಮಿ, ತಾವರಗೆರೆ ತಿಪ್ಪಯ್ಯ, ರಾಜಪಟೇಲ್, ಮಹಬೂಬ ಪಟೇಲ್, ಗಂಗರಾಮಗೌಡ ಪ್ರಮುಖ ಶಿಷ್ಯರು. ಇವರ ಆತ್ಮೀಯ ಸ್ನೇಹಿತರು ಹಲಕಟ್ಟಿಯ ಪಾಶಾಖಾದಿರ, ಶಂಕ್ರಪ್ಪ ಬನ್ನೂರ, ತಾಡತೆಗನೂರಿನ ಮಹಾದೇವಪ್ಪ ನರೋಣಿ, ಹುಲಗೋಳದ ಹಣಮಂತ ಉದನೂರ.

## ೧೮. ಅವಧೂತ ರಾಮಲಿಂಗ

ಅವಧೂತ ರಾಮಲಿಂಗೇಶ್ವರರು ಮುರುಘೇಂದ್ರಸ್ವಾಮಿಗಳ ಹಿರಿಯ ಮತ್ತು ಕರಿಘೂಳೇಶ್ವರರ ಕಿರಿಯ ಸಹೋದರರಾಗಿ ಕಂಡು ಬರುತ್ತಾರೆ. ಮುರುಘೇಂದ್ರಸ್ವಾಮಿಗಳಿಗಿಂತ ಸುಮಾರು ಎರಡು ವರ್ಷ ದೊಡ್ಡವರೆಂದು ತಿಳಿದು ಬರುತ್ತದೆ. ಇವರು ಗುಲಬರ್ಗಾ ಜಿಲ್ಲೆಯ ಯಾದಗಿರ ತಾಲೂಕಿನ ಖಾನಾಪುರದಲ್ಲಿ ನೆಲೆಸಿ ತಮ್ಮ ಆಧ್ಯಾತ್ಮ ಜೀವನವನ್ನು ಕಳೆದು ಅಲ್ಲಿಯೇ ಲಿಂಗೈಕ್ಯರಾದರು.

ಕಷ್ಟಗಳಿಂದ ಪರಿವಾರದೊಡನೆ ಗೌಡಗಾಂವ ಗ್ರಾಮ ಬಿಟ್ಟು ರಾಯಚೂರಿಗೆ ಬಂದ ಶರಣಯ್ಯ (ತಂದೆ)ನವರ ಪರಿಸ್ಥಿತಿಯನ್ನು ತಿಳಿದುಕೊಡು ಚಿಕ್ಕ ವಯಸ್ಸಿನಲ್ಲಿಯೇ ಜವಳಿ ಅಂಗಡಿಯಲ್ಲಿ ತಿಂಗಳಿಗೆ ಮೂವತ್ತು ರೂಪಾಯಿ ಸಂಬಳ ಪಡೆದು ಕೆಲಸಕ್ಕೆ ಸೇರಿ ಸ್ವಲ್ಪ ದಿನಗಳ ನಂತರ ಹಿರಿಯ ಅಣ್ಣ ಕರಿಘೂಳೇಶ್ವರರಿಂದ ಗುರು ಬೋಧನೆ ಪಡೆದುಕೊಂಡು ಅನುಭಾವ ಸಾಹಿತ್ಯ ರಚನೆಯಲ್ಲಿ ತೊಡಗುತ್ತಾರೆ. ಚಿಕ್ಕವರಿರುವಾಗಲೇ ಅನೇಕ ಪವಾಡಗಳನ್ನು ಮಾಡಿದ ಇವರು ಹೇಳುವ ಹೇಳಿಕೆ ಹುಸಿಗೊಳ್ಳುತ್ತಿರಲಿಲ್ಲ ಅಂದದ್ದು ಆಗುತ್ತಿತ್ತು. ಇದಕ್ಕೆ ಉದಾಹರಣೆ ಎಂಬಂತೆ, ಚಿಕ್ಕವರಿರುವಾಗ ಒಮ್ಮೆ ಊರಿನ ಓಣಿಯಲ್ಲಿ ನಡೆದು ಹೋಗುತ್ತಿದ್ದಾಗ ಯುವತಿಯೊಬ್ಬಳು ಇವರ ಹತ್ತಿರ ಬಂದು "ಐನೋರಾ ನಿನ್ನ ಮಾತು ಖರೆ ಬರುತಾವಂತ, ನನ್ನ ಭವಿಷ್ಯ ಹೇಳು ಎಂದಳು. ಅದಕ್ಕೆ ರಾಮಲಿಂಗರು ಮೊದಲು ದುಡ್ಡು ಇಡು ನಂತರ ಹೇಳುತ್ತೇನೆ ಎಂದರು. ಆ ಯುವತಿ ದುಡ್ಡು ಇಟ್ಟು ಈಗ ಹೇಳು ನನಗ ಮಕ್ಕಳ ಅಗತ್ತಾವ ಏನು ಇಲ್ಲ, ಅದಕ್ಕೆ ರಾಮಲಿಂಗರು "ಹೋಗು ನಿನಗೂ ಮಕ್ಕಳು ಆಗತಾವ"[೧೫] ಎಂದರು. ಮುಂದೆ

ಮೂರು ತಿಂಗಳ ಒಳಗೆ ಆ ಯುವತಿ ಗರ್ಭಿಣಿಯಾದಳು. ಇದರಿಂದ ಊರಿನ ಎಲ್ಲರೂ ಆ ಯುವತಿಗೆ ನಿಂದಿಸಿದರು. ಕಾರಣವೆಂದರೇ ಆಕೆ ಮದುವೆಯೇ ಆಗಿರಲಿಲ್ಲ "ರಾಮಲಿಂಗರ ಹೇಳಿಕೆಯಂತೂ ನಿಜವಾಗಿತ್ತು." ಈ ತರಹ ಶರಣರನ್ನು ಕಾಡಿ ಇನ್ನೂ ಹೆಚ್ಚಿನ ಸತ್ಯ ಪರೀಕ್ಷೆ ಮಾಡಬೇಕೆಂದು ಜನಸಾಮಾನ್ಯರು ನಿರೀಕ್ಷಿಸುತ್ತಾರೆ. ಇಂತಹ ಪರೀಕ್ಷೆಯಲ್ಲಿ ಅಸಹಾಯಕರಾದರೆ ಅವರನ್ನು ಯಾವ ಲೆಕ್ಕಕ್ಕೂ ಪರಿಗಣಿಸುವುದಿಲ್ಲ.

ಕರಿಘೂಳೇಶ್ವರರಿಂದ ಶಿಷ್ಯತ್ವ ಪಡೆದ ರಾಮಲಿಂಗ ಮತ್ತು ಮುರುಘೇಂದ್ರಸ್ವಾಮಿಗಳು ಇಬ್ಬರು ಕೂಡಿಯೇ ಅನೇಕ ಕೃತಿಗಳನ್ನು ರಚಿಸಿದರು. ಅನೇಕ ಕಡೆಗಳಿಂದ ಗೌರವಗಳನ್ನು, ಪ್ರಶಸ್ತಿಗಳನ್ನು ಪಡೆದುಕೊಂಡು ಜನಸಾಮಾನ್ಯರ ಜೀವನದಲ್ಲಿ ತಮ್ಮದೇ ಆದ ಮೂಲ ಉದ್ದೇಶವನ್ನಿಟ್ಟುಕೊಂಡು ಜನಪದರಿಗೆ ಅತೀ ಹತ್ತಿರವಾದ ರೀತಿಯಲ್ಲಿ ಬೆರೆತು ಜೀವನ ನಡೆಸಿದರು.

ಎಲ್ಲ ಶರಣ ಸಂತರಂತೆ ರಾಮಲಿಂಗರು ಒಂದೇ ಕಡೆ ನಿಲ್ಲದೆ ಜೀವನವನ್ನೆಲ್ಲಾ ತಿರುಗಾಡುತ್ತಾ ತಮ್ಮ ವಿಚಾರಗಳನ್ನು ಜನರಿಗೆ ಬೋಧಿಸಿದರು. ಒಮ್ಮೆ ಹೀಗೆ ತಿರುಗಾಡುತ್ತ ಮರತೂರ ಗ್ರಾಮಕ್ಕೆ ಹೋದಾಗ ಮಸೂದಿಯ ವಿಶಾಲ ಅಂಗಳದಲ್ಲಿ ಮುಸ್ಲಿಂಮರು ಸಾಮೂಹಿಕ ಪ್ರಾರ್ಥನೆಯಲ್ಲಿ ತೊಡಗಿದ್ದರು. ಇವರನ್ನು ನೋಡಿದ ರಾಮಲಿಂಗರು ನೇರವಾಗಿ ಮುಸ್ಲಿಂ ಪ್ರಾರ್ಥನ ಮಂದಿರಕ್ಕೆ ಹೋಗಿ ಎಲ್ಲಾ ಮುಸ್ಲಿಂಮರ ಎದುರಿನಲ್ಲೇ 'ಅಲ್ಲಾಹು ಅಕ್ಬರ್' ಅಂತ ಅಜಾ ಕೊಟ್ಟರಂತೆ ನೆರೆದಿದ್ದ ಮುಸ್ಲಿಂಮರೆಲ್ಲರೂ ಬೆರಗುಗೊಂಡು ಈ ವಿಷಯವನ್ನು ನಿಜಾಮನಿಗೆ ತಿಳಿಸಿದಾಗ ನಿಜಾಮನು ಸರಕಾರದ ವತಿಯಿಂದ 'ವಾಲೂಮೆ ಮಾರಿಫತ್', 'ತೊಹಿದೆ ಇಲಾಹಿ', 'ದಾಲಿದ್ದೀರಂತ್', 'ನೂರ್ ಎ ನಬಿ' ಎಂಬ ಬಿರುದುಗಳನ್ನು ರಾಮಲಿಂಗರಿಗೆ ಪ್ರಧಾನ ಮಾಡಿದರು. ಹೀಗೆ ರಾಮಲಿಂಗರೂ ಇಲ್ಲಿ ಹಿಂದೂ-ಮುಸ್ಲಿಂ ಸೌಹಾರ್ದತೆಯನ್ನು ಬೆಳೆಸಿದರು.

ರಾಮಲಿಂಗರು ಆಧ್ಯಾತ್ಮ ಜೀವನ, ತತ್ವಶಾಸ್ತ್ರ, ತತ್ವದರ್ಶನ, ನೀತಿಶಾಸ್ತ್ರ ಕೃತಿಗಳನ್ನು ರಚಿಸಿದರೆಂದು ತಿಳಿದುಬಂದರೂ ಅವು ನಮಗೆ ಇಂದಿಗೂ ಅಲಭ್ಯ. ರಾಮಲಿಂಗರು ಮಾಟ-ಮಂತ್ರಗಳಿಗೆ ಅತಿಯಾಗಿ ಪ್ರೀತಿಸುತ್ತಿದ್ದರು. ಅಲೌಖಿಕ ವಿಷಯಗಳಲ್ಲಿಯೂ ಪಾಂಡಿತ್ಯವನ್ನು ಪಡೆದಿದ್ದರು. ತಮ್ಮ ಆಸರೆ ಬಳಸಿ ಬಂದ ಜನರಿಗೆ, ಅವರ ಕಷ್ಟ-ಪೀಡೆಗಳಿಗೆ ಮಾಟ-ಮಂತ್ರ ವಿದ್ಯೆಯಿಂದ ಪರಿಹಾರವನ್ನು ನೀಡುತ್ತಿದ್ದರು. ಇಂದಿಗೂ ಇವರ ಸಮಾಧಿ ಬಳಿ ಜನ ಇವರು ಪವಾಡ ಪುರುಷರೆಂದು ಕಿಕ್ಕಿರಿದು ದರ್ಶನ ಪಡೆಯಲು ನಿಂತಿರುತ್ತಾರೆ. ಜನರ ಮೇಲೆ ಹೀಗೆ ತಮ್ಮದೆ ಪ್ರಭಾವ ಬೀರಿದ್ದಾರೆ.

ಜನಪದರಿಗೆ ಹತ್ತಿರವಾಗಿದ್ದ ರಾಮಲಿಂಗರು ಹಿಂದಿನ ಭವಿಷ್ಯ ಹೇಳುತ್ತಿದ್ದರು. ಹಿಂದೆ ನಡೆದ ಘಟನೆಗಳನ್ನು ಮತ್ತು ಘಟಿಸದಿರಲು ಇವರ ಜ್ಞಾನ ಶಕ್ತಿ ಕಾರಣವಾಗಿತ್ತು. ಈ ಎಲ್ಲ ವಿಷಯಗಳ ಜೊತೆಗೆ ರಾಮಲಿಂಗರು ಅನುಭಾವ ಸಾಹಿತ್ಯ ರಚನೆಯಲ್ಲಿ ಸಿದ್ಧಹಸ್ತರಾಗಿ ಅಪಾರ ಜ್ಞಾನವನ್ನು ಪಡೆದು ಅನುಭಾವ ಸಾಹಿತ್ಯದಲ್ಲಿ ಹಿರಿಮೆಯನ್ನು ಸಾಧಿಸಿದರು. ಅವರ ಅಗಾಧ ಅನುಭವ ಶಕ್ತಿಗೆ

ಉದಾಹರಣೆಯೆಂಬಂತೆ "ನಳನಸುತೆ ಇಳೆಯೊಳಗೆ ಉದಿಸಿಹಳೋss" ಎಂಬ ತತ್ವಪದ ರಚಿಸಿದರು. ಈ ತತ್ವಪದದಲ್ಲಿ ಅವರ ಪಾಂಡಿತ್ಯವನ್ನು ಗುರುತಿಸಬಹುದು. ಪ,ಬ,ಮ, ಈ ಮೂರು ಅಕ್ಷರಗಳಿಲ್ಲದೆ ಈ ಪದವನ್ನು ರಚಿಸಿದರು. ಜನಪದರಂತೂ ಇಂದಿಗೂ ಇದನ್ನು ಇಷ್ಟಪಟ್ಟು ಹಾಡುತ್ತಾರೆ. ಜನಪದರು ಇದಕ್ಕೆ 'ತುಟಿಗೆ ತುಟಿ ಹತ್ತಲಾರದ ಪದ' ಎಂದು ಕರೆಯುತ್ತಾರೆ.

"ನಳಿನಸುತೆ ಯಿಳಿಯೊಳಗ ಉದಸಿಹಳೋ।

ಕಳೆದುಳಿದು ನಯನದಿ

ಸುಳಿವ ದಳಗಳನಟ್ಟಿ ತಿರುಗುವಳೋ॥

ನಳಿನ ದಳಗಳು ಹೊಳೆದು ಥಳಥಳ ಕಾಳಿ ತ್ರಿಗುಣದಿ।

ಇಳಿದಳಾಕ್ಷಣ ಯೋಗದಾರಿಲಿ।

ನಳಿನ ಕರ್ನಿರೆಯು ನಡುನಾಡದಿ"೧೬ ॥ಪಲ್ಲವಿ॥

ಪ,ಬ,ಮ ಈ ಮೂರು ಅಕ್ಷರಗಳು ಹಾಡಿನಲ್ಲಿ ಎಲ್ಲಿಯೂ ಕಂಡು ಬರುವುದಿಲ್ಲ. ಪ,ಬ,ಮ ಅಕ್ಷರಗಳಿಲ್ಲವೆಂದ ಮೇಲೆ ತುಟಿಗೆ ತುಟಿ ಹತ್ತುವುದಿಲ್ಲ. ರಾಮಲಿಂಗರು ಈ ಪದ ರಚಿಸುವಾಗ ಈ ಅಂಶಗಳನ್ನು ಮುಂದಿಟ್ಟುಕೊಂಡು ಅಥವಾ ಅನುಭವಕ್ಕೆ ಬಂದ ಹಾಗೇ ಪದ ರಚಿಸಿದರೋ ಇದು ಅವರಿಗೆ ಬಿಟ್ಟ ವಿಷಯ ಆದರೂ ಈ ಪದ ರಚಿಸಿದ ಮೇಲೆ ಅವರ ಪಾಂಡಿತ್ಯ ಪ್ರದರ್ಶನಗೊಂಡದ್ದು ಮಾತ್ರ ಸತ್ಯ.

ಈ ಮೂರು ಜನ ಅಣ್ಣತಮ್ಮಂದಿರಲ್ಲಿ ಹಿರಿಯನಾದ ಕರಿಘೂಳೇಶ್ವರನನ್ನು ಗುರುವೆಂದೆ ಭಾವಿಸಿಕೊಂಡಿದ್ದರು. ಮೂರು ಜನ ಒಟ್ಟಿಗೆ ಸೇರಿದರೆ ಅನಾಹುತ ಘಟಿಸುವುದೆಂಬ ಭವಿಷ್ಯದ ಪ್ರಕಾರ ಹಿರಿಯ ಅಣ್ಣನನ್ನು ಬಿಟ್ಟು ಮುರುಘೇಂದ್ರ ಮತ್ತು ರಾಮಲಿಂಗರು ಜೊತೆಯಾಗಿಯೇ ಇರುತ್ತಿದ್ದರು. ಹೆಸರಿಗೆ ಮಾತ್ರ ಬೇರೆ ಬೇರೆ ಊರಿನಲ್ಲಿದ್ದರು. (ರಾಮಲಿಂಗ ಯಾದಗೀರ ತಾಲೂಕಿನ ಖಾನಾಪುರ) (ಮುರುಘೇಂದ್ರ ಸೇಡಂ ತಾಲೂಕಿನ ಎಲೆರಾಜೋಳ) ಮನಸ್ಸು ಮಾತ್ರ ಒಂದೇ ಕಡೆ. ಸೇಡಂ ಮತ್ತು ಯಾದಗಿರ ಅಕ್ಕಪಕ್ಕದ ಗಡಿ ಭಾಗದ ತಾಲೂಕುಗಳು. ಇವೆರಡು ಊರುಗಳಿಗೆ ಹೋಲಿಸಿದರೆ ಹಿರಿಯಣ್ಣ ಕರಿಘೂಳೇಶ್ವರ ಗುಲ್ಬಾರ್ಗ ಜಿಲ್ಲೆಯ ಫರಹತಾಬಾದಿನಲ್ಲಿ ವಾಸಿಸುತ್ತಿದ್ದ. ಮೂವರು ಒಂದೇ ಜಿಲ್ಲೆಯವರಾದರೂ, ಬೇರೆ ಬೇರೆ ಪ್ರದೇಶದಲ್ಲಿ ನೆಲೆಸಿದ್ದರು.

**ಅಡಿ ಟಿಪ್ಪಣಿಗಳು**

೧. ವಚನ ಸಂಪುಟ ಭಾಗ-೨, ಪು.೩೬

೨. ಲಿಂಗಾಯತ ಧರ್ಮ: ಒಂದು ಅಧ್ಯಯನ, ಪು.೧೬೩೧೬೪

೩. ಕೂಡಲೂರು ಬಸವಲಿಂಗ ಶರಣ, ಪು.೧೮

೪. Encyclopedia Britanica, vol-16

೫. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೬೩

೬. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೬೪

೭. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೬೫

೮. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೧೦೪-೧೦೫

೯. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೯೩

೧೦. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೯೩

೧೧. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೯೩

೧೨. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೯೪

೧೩. ಕನ್ನಡ ಸಂತರ ಪಾರಮಾರ್ಥಿಕ ಪಥ, ಪು.೩೪

೧೪. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೦೧

೧೫. ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ, ಪು.೯

೧೬. ನಿಜಾನಂದ ಕೈವಲ್ಯ, ಪು.೫೫

❑❑

ಮುರುಘೇಂದ್ರಸ್ವಾಮಿಗಳು ಪವಾಡ ಪುರುಷರಾಗಿ, ಮಹಾಮಹಿಮರಾಗಿ, ಆಧ್ಯಾತ್ಮ ಸಾಧಕರಾಗಿ, ದೇವಿಯ ಉಪಾಸಕರಾಗಿ, ಸಮಾಜ ಸುಧಾರಕರಾಗಿ ಜೊತೆಗೆ ವರಕವಿಯಾಗಿ ನಮಗೆ ಕಂಡುಬರುತ್ತಾರೆ. ತಾವು ಸಿದ್ಧಿ ಪಡೆದ ಎಲ್ಲ ಶಾಸ್ತ್ರಗಳು ತಮ್ಮೊಂದಿಗೆ ನಶಿಸದಿರಲೆಂದು ಅನೇಕ ಕೃತಿಗಳಲ್ಲಿ ತಮಗೆ ಬಲ್ಲವುಗಳನ್ನೆಲ್ಲ ಬರೆದು ಓದುಗರಿಗೆ ದಾರಿದೀಪವಾಗಿ ಬೆಳಕು ತೋರಿದ್ದಾರೆ. 'ಕರಿಘೂಳೇಶ್ವರರ' ಶಿಷ್ಯರಾಗಿ ಅವರು ಬೋಧಿಸಿದಂತೆ ಜನರಿಗೆ ಏನು ನೀಡಬೇಕೆಂಬ ಗುರಿಯೊಂದಿಗೆ ತಮ್ಮ ಅನುಭವದ ಮುಖಾಂತರ ಅನೇಕ ಕೃತಿಗಳನ್ನು ರಚಿಸಿದ್ದಾರೆ. ಸುಮಾರು ಮೂರನೂರ ಅರವತ್ತು (೩೬೦) ವಿಷಯಗಳನ್ನು ಅಭ್ಯಾಸಿಸಿದ ಮುರುಘೇಂದ್ರಸ್ವಾಮಿಗಳು ಜನಪದ ಸಾಹಿತ್ಯ, ಶಿಷ್ಟ ಸಾಹಿತ್ಯಗಳಲ್ಲದೆ, ರಾಜನೀತಿ, ಭೂಗೋಳ, ಇತಿಹಾಸ, ತರ್ಕಶಾಸ್ತ್ರ, ಪ್ರಪಂಚಪರ್ಯಟನೆಗಳನ್ನು ಕೃತಿಗಳ ರೂಪದಲ್ಲಿ ಪ್ರಚುರಪಡಿಸಿದ್ದಾರೆ.

ಕನ್ನಡ, ಹಿಂದಿ, ತೆಲುಗು, ಭಾಷೆಗಳಲ್ಲಿ ಪಾಂಡಿತ್ಯ ಪಡೆದ ಮುರುಘೇಂದ್ರಸ್ವಾಮಿಗಳು ಅಂದಿನ ದಿನದಲ್ಲಿನ ಕನ್ನಡದ ಪರಿಸ್ಥಿತಿಯನ್ನು ಅರಿತು ತಮ್ಮ ಕೃತಿಗಳನ್ನು ಹೆಚ್ಚಾಗಿ ಕನ್ನಡದಲ್ಲಿ ರಚಿಸಿದ್ದಾರೆ. ನಾವು ಮುರುಘೇಂದ್ರಸ್ವಾಮಿಗಳ ಒಟ್ಟು ಕೃತಿಗಳನ್ನು ನೋಡುವಾಗ ಸಿಕ್ಕಂತಹ ಕೃತಿಗಳನ್ನು ಒಂದು ಕಡೆ, ಇನ್ನೂ ದೊರೆಯದ ಕೃತಿಗಳನ್ನು ಮತ್ತೊಂದು ಕಡೆ ನೋಡಬಹುದು.

| ಲಭ್ಯ ಕೃತಿಗಳು | ಅಲಭ್ಯ ಕೃತಿಗಳು |
|---|---|
| ೧. ನಿಜಾನಂದ ಕೈವಲ್ಯ ಅಥವಾ ಅಪರೋಕ್ಷ ಜ್ಞಾನಪ್ರದೀಪಿಕಾ | ೧. ಪ್ರಪಂಚ ದರ್ಪಣ |
| ೨. ರಮ್ಮಶಾಸ್ತ್ರ | ೨. ಚೆನ್ನಬಸವ ಪುರಾಣ |
| ೩. ಘಟಚಕ್ರ | ೩. ವೇದಾಂತ ಪಂಚಕರ್ಣ |
| ೫. ಮೋಕ್ಷ ಸಾಮ್ರಾಜ್ಯ | ೪. ಭೂಗೋಳ ಇತಿಹಾಸ |

**ಲಭ್ಯಕೃತಿಗಳ ಸಂಕ್ಷಿಪ್ತ ವಿವರಣೆ**

**೧. ನಿಜಾನಂದ ಕೈವಲ್ಯ:** ಕನ್ನಡ ನಾಡಿನಲ್ಲಿ ಅದರಲ್ಲೂ ಹೈದರಾಬಾದ್-ಕರ್ನಾಟಕದ ಪ್ರತಿ ಊರಲ್ಲಿ ಹುಡುಕುತ್ತಾ ಹೋದರೆ ಕನಿಷ್ಟ ಒಬ್ಬ ತತ್ವಪದಕಾರನಾದರೂ ದೊರೆಯುತ್ತಾನೆ. ತತ್ವಪದವನ್ನು ಅನುಭಾವ ಸಾಹಿತ್ಯವೆಂದಲೂ ಕರೆಯಬಹುದು. ಜನಪದರಲ್ಲಿ ಭಜನೆಯ ಹಾಡುಗಳೆಂದು ಕರೆಯುವುದು ರೂಢಿಯಿದೆ. ಈ ಹಾಡುಗಳು ಜನಸಾಮಾನ್ಯರ ಬದುಕಿನೊಂದಿಗೆ ಸ್ಪಂದಿಸುತ್ತಾ ಸಂಸ್ಕೃತಿಯ ವಾಹಕವಾಗಿ

ಉಳಿದುಕೊಂಡು ಬಂದಿರುವುದರಿಂದಲೇ ಇಂದಿಗೂ ಇವು ಜನಪದರಲ್ಲಿ ಸ್ಥಾನ ಪಡೆದಿವೆ. ಹಳ್ಳಿ ಹಳ್ಳಿಗಳಲ್ಲಿ ಭಜನೆ ಮಾಡುವಾಗ ಇವರ ಹಾಡುಗಳು ಇನ್ನೂ ಹಾಡಲ್ಪಡುತ್ತವೆ.

'ನಿಜಾನಂದ ಕೈವಲ್ಯ' ಎಂಬ ಕೃತಿಯಲ್ಲಿ ಮುರುಘೇಂದ್ರರು ಅನುಭವ ಸಾಹಿತ್ಯ, ತತ್ವಪದ, ಭಜನಾ ಹಾಡುಗಳನ್ನೇ ರಚಿಸಿದ್ದಾರೆ. ಇಲ್ಲಿ ಹಿಂದಿನ ತತ್ವಪದಕಾರರನ್ನೇ ಅನುಸರಿಸಿದ ಇವರ ಈ ಕೃತಿಯಲ್ಲಿ ದೇವರ ಸ್ತುತಿ, ಗುರುವಿನ ಬಗ್ಗೆ, ಬ್ರಹ್ಮಾಂಡ-ಜೀವರಾಶಿಯ ಸಂಬಂಧ, ಆತ್ಮ ನಿವೇದನೆ, ಧರ್ಮ-ಕುಲ-ಸಮಾಜದ ಹೆಣ್ಣು-ಗಂಡಿನ ಬೋಧನೆ, ಸವಾಲು-ಜವಾಬುಗಳು-ಹೀಗೆ ಹಲವು ವಿಷಯಗಳ ಕುರಿತು ತತ್ವಪದಗಳನ್ನು ರಚಿಸಿದ್ದಾರೆ. ಮುರುಘೇಂದ್ರಸ್ವಾಮಿಗಳಿಂದ ರಚಿತವಾದ ತತ್ವಪದಗಳು ಇಂದು ಜನರು ಭಜನೆಗಳಲ್ಲಿ, ಭಜನಾ ಮಂಡಳಿಗಳಲ್ಲಿ ಹಾಡುವುದನ್ನು ಕಾಣಬಹುದು.

೨. **ರಮ್ಲಶಾಸ್ತ್ರ:** ಈ ಕೃತಿಯಲ್ಲಿ ಮುರುಘೇಂದ್ರಸ್ವಾಮಿಯು ಗಣಿತ, ಸಂಖ್ಯಾಶಾಸ್ತ್ರಗಳನ್ನು ಮತ್ತು ಸಂಪೂರ್ಣ ವರ್ಣಮಾಲೆ ಕುರಿತು ಚರ್ಚಿಸಲಾಗಿದೆ. ಇಲ್ಲಿ ಮುರುಘೇಂದ್ರರು ಲಾಕ್ಷಣಿಕರಂತೆ ಕಂಡುಬರುತ್ತಾರೆ. ಇಲ್ಲಿನ ವಿಶೇಷತೆ ಎಂದರೆ, ಏಳು ಹೆಡೆಗಳ ಸರ್ಪದ ಚಿತ್ರದ ಮೇಲೆ ವರ್ಣಮಾಲೆಯನ್ನು, ಹೆಡೆಯಲ್ಲಿ "ಅ" ಪ್ರಾರಂಭವಾಗಿ ಸರ್ಪದ ಬಾಲದಲ್ಲಿ ವರ್ಣಮಾಲೆ ಪೂರ್ಣಗೊಳ್ಳುವುದು. ಘಟ = ದೇಹವೆಂದು ಹಲವರು ಕರೆದರೆ, ಮುರುಘೇಂದ್ರಸ್ವಾಮಿಗಳು ಘಟವನ್ನು ಹಾವೆಂದು ಇಲ್ಲಿ ಕರೆದಿದ್ದಾರೆ.

೩. **ಘಟಚಕ್ರ** : ಶರೀರಜನಿತ ವಾಯುನಿರೋಧವೇ ಪ್ರಾಣಾಯಾಮವಿಧಿ. ಈ ಪ್ರಾಣಾಯಾಮಕ್ಕೆ ಮೊದಲು ತಿಳಿದಿರಬೇಕಾದುದೆಂದರೆ ಯೋಗಮಂಟಪದ ರಚನಾಕ್ರಮ. ಈ ಯೋಗಮಂಟಪಕ್ಕೆ ಪ್ರಾಕಾರ-ವೇದಿಕೆ-ಕೂಪ-ಅಲ್ಪದ್ವಾರ-ಆರಂಧ್ರ-ವಿತಾನ-ಸಕಲಲಾದಾರಹಿತತ್ಯಾದಿ ಸಲ್ಲಕ್ಷಣಗಳಿರಬೇಕು. ಕುಶ-ಕೃಷ್ಣಾ-ಜಿನ-ಯೋಗಗೃಹೋಪಕರಣಗಳಿರಬೇಕು. ತೈಲ-ಪಿಣ್ಯಾಕ ಮುಂತಾದ ಯೋಗೀಶ್ವರ ನಿಷಿದ್ಧ ದ್ರವ್ಯಗಳಿರಬಾರದು. 'ಮುದ್ಗ-ಪಟೇಲಕ-ಗೋಧುಮ' ಮುಂತಾದ ಯೋಗೀಶ್ವರ ಸ್ವೀಕಾರಾರ್ಹ ವಸ್ತುಗಳಿರಬೇಕು ಪ್ರಾಣಾಯಾಮ ಪ್ರಾರಂಭದಲ್ಲಿ ಶ್ರೀಗುರು-ಸರಸ್ವತಿ-ವಿಘ್ನೇಶ್ವರ-ವಿಶಾಖ ಪೂಜಾವಿಧಾನಗಳನ್ನ ಅನುಸರಿಸಬೇಕು.

ಘಟ ಎಂದರೆ ದೇಹ, ಚಕ್ರವೆಂದರೆ ಇಡೀ ದೇಹದ ರಚನೆ, ಮನುಷ್ಯ ಶರೀರ ೯೬ ಅಂಗಲ ಉದ್ದವೆಂದು ಸಾಮಾನ್ಯಗ್ರಹಿಕೆ. ಎಲ್ಲಿ ಗುದಸ್ಥಾನದಿಂದ ಎರಡಂಗುಲ ಮೇಲೆ, ಶಿಶ್ನಸ್ಥಾನದಿಂದ ಎರಡಂಗುಲ ಕೆಳಗೆ-ಅನ್ನು ನಡುವೆ ಬಾದಗುಲ ಪ್ರಮಾಣದ ಸ್ಥಾನವೇ 'ದೇಹಮಧ್ಯ' ಎನಿಸುವುದು-ಅದೇ ಮೂಲಾಧಾರವೆಂದು ಶಿಖಿಸ್ಥಾನವೆಂದು ಪ್ರಸಿದ್ಧವಾಗಿರುವುದು. ಅದು ತ್ರಿಕೋಣಾಕಾರವಾಗಿ ತಪ್ತಸುವರ್ಣಕಾಂತಿಯುಳ್ಳದಾಗಿ ಇರುವುದು.

ಆ ಮೂಲಾಧಾರದಿಂದ ಒಂಬತ್ತು ಅಂಗುಲ ಉದ್ದ (ಎತ್ತರ)ದಲ್ಲಿ ನಾಲ್ಕಂಗುಲ ವಿಸ್ತಾರವೂ ಕೋಳೀಮೊಟ್ಟೆಯ ಆಕಾರವು ಆಗಿರುವ ನಾಡೀಕಂದವಿರುವುದು. ಆ ನಾಡೀಕಂದದ ನಡುಭಾಗವೇ ನಾಭಿ ಎನಿಸುವುದು.

ಈ ನಾಡೀಕಂದದಿಂದ ಎರಡಂಗುಲ ಕೆಳಗೆ ಕುಂಡಲೀ(ನಿ) ಸ್ಥಾನವಿರುವದು. ಅಲ್ಲಿ ಕುಂಡಲೀ ಸರ್ಪನು ಅಷ್ಟಪ್ರಕೃತಿ ರೂಪದಿಂದ ಸಪ್ತ ಕುಟಿಲಾಕೃತಿಯಾಗಿ ಆ ನಾಡೀಕಂದದ ಮಧ್ಯದಲ್ಲಿರುವ ಸುಷುಮ್ನ ಎಂಬ ನಾಡಿಯ ದ್ವಾರವನ್ನು ತನ್ನ ಮುಖದಿಂದ ಮುಚ್ಚಿ ಮರೆಸಿ ನಿದ್ರೆ ಮಾಡುತ್ತಿರುವುದು.

ನಾಡೀಕಂದದಿಂದ ಮೇಲೆ ಹನ್ನೆರಡು ಅಂಗುಲದ ಉದ್ದವೇ ಕಾಂಡವಾಗಿ ಎಂಬುದಳವಿರುವ, ನಾಲ್ಕಂಗುಲ ಹರಡಿಸುವ, ಬಾಳೆಯ ಹೂವಿನಂತೆ ಅಧೋಮುಖವಾಗಿರುವ ಪೂರ್ವ ಹೃದಯಕಮಲ ವಿರುವುದು, ಅಲ್ಲಿ ಜೀವ ಹಂಸನು ಕರ್ಮಪಾಶಬದ್ಧನಾಗಿ ವಾಲಾಗ್ರ ಶತಭಾಣೆಯೊಳು ಒಂದು ಅನಿತು ಸೂಕ್ಷ್ಮವಾಗಿ ಮನಸ್ಸಿನ ನಡುವಳಿಕೆಯನ್ನು ನಡೆಸುತ್ತಿರುವನು.

ಈ ರೀತಿಯಾಗಿ ಇಡೀ ದೇಹರಚನೆಯ ಕುರಿತು ಮುರುಘೇಂದ್ರ ಸ್ವಾಮಿ ಘಟಚಕ್ರ ಕೃತಿ ಹೇಳಿದ್ದಾರೆ. ಇದರಂತೆ ಇನ್ನುಳಿದ ಕೃತಿಗಳು ಲಭ್ಯವಾಗಿಲ್ಲ, ಅವುಗಳ ಶೋಧ ಕಾರ್ಯ ಮಾಡುವುದು ಅವಶ್ಯವಾಗಿದೆ. ಹೀಗೆ ಮುರುಘೇಂದ್ರಸ್ವಾಮಿಯವರು ರಚಿಸಿರುವ ಕೃತಿಗಳು ಒಂಬತ್ತು ಎಂಬುದು ತಿಳಿದುಬಂದಿದೆ. ಆದರೆ ನಮಗೆ ಲಭ್ಯವಾದ ಕೃತಿಗಳು ಮಾತ್ರ ಮೂರು ದೊರೆತ ಈ ಮೂರು ಕೃತಿಗಳು ಅಂದಿನ ಹಾಗೂ ಇಂದಿನ ಸಾಹಿತ್ಯದಲ್ಲಿ ವಿಶೇಷಸ್ಥಾನವನ್ನು ಗುರುತಿಸಿಕೊಂಡಿವೆ.

**ಅನುಭಾವ ಸಾಹಿತ್ಯ ಮತ್ತು ತತ್ವಪದ**

'ಕನ್ನಡದ ಅನುಭಾವ ಸಾಹಿತ್ಯವು ಪ್ರಪಂಚದ ಮತ್ತು ಭಾರತದ ಇತರ ಪ್ರಾಂತಗಳ ಅನುಭಾವಿಗಳ ಸಾಹಿತ್ಯಕ್ಕೆ ಹೆಗಲೆಣೆಯಾಗಿ ನಿಲ್ಲಬಲ್ಲದು.'[9] ಸಾಮಾನ್ಯ ಮನುಷ್ಯನ ದಿನ ನಿತ್ಯದ ಅನುಭವ ಇಂದ್ರಿಯಜನ್ಯ ಜ್ಞಾನ; ಅನುಭಾವಿಯ ಸಾಧನಾ ಬಲದಿಂದ ಸಿದ್ಧಿಸುವ ಅತೀಂದ್ರಿಯವಾದ ಆಧ್ಯಾತ್ಮಿಕ ಜ್ಞಾನ 'ಅನುಭಾವ' ಎಂಬ ಹೆಸರಿನಿಂದ ವ್ಯವಹರಿಸಲ್ಪಡುತ್ತದೆ. ಅನುಭಾವ ಪರಮಾತ್ಮ ಸಾಕ್ಷಾತ್ಕಾರ ತತ್ವ, ಇದು ಸಾಧನ ಮಾರ್ಗದಲ್ಲಿ ಒಂದು ವಿಧವಾದ ಅಂತರ್ಬೋಧೆಯಿಂದ (Intuition) ಲಭಿಸತಕ್ಕದ್ದು. ಈ ಅನುಭವ ಕ್ಷಣಿಕವಲ್ಲ; ನಿರಂತರವಾದದ್ದು, ವೃದ್ಧಿಶೀಲವಾದದ್ದು. ಅನುಭಾವ ಸಾಧನೆ ಸಿದ್ಧಿಗಳಿಗೆ ಗುರುವಿನ ಉಪದೇಶ ಅಗತ್ಯ. ಸಾಧನೆಯಲ್ಲಿ ಸಿದ್ಧಿಯನ್ನು ಪಡೆದವನೇ ಅನುಭಾವಿ. ಅನುಭಾವಿಗಳು ಯಾವುದೇ ದೇಶದವರಾಗಲಿ, ಯಾವ ಭಾಷೆಯವರೇ ಆಗಲಿ ಅವರ ಅನುಭವ ಪ್ರಕಾರದಲ್ಲಿ ಸಾರ್ವತ್ರಿಕಾನ್ವಯದ ಸಮಾನ ಲಕ್ಷಣಗಳನ್ನು ಗುರುತಿಸಬಹುದು. ಒಬ್ಬ ಅನುಭವಿ, ಇನ್ನೊಬ್ಬ ಅನುಭವಿಯನ್ನು ಸಂದಿಸಿದಾಗ ವಿಚಾರ ವಿನಿಮಯ ಮಾಡಿಕೊಂಡ ಸಂದರ್ಭದಲ್ಲಿ ಇಬ್ಬರ ಅನುಭವವು ಒಂದೇ ಬಗೆಯದಾಗಿರುವುದು ಕಂಡು ಬಂದಿದೆ. ಅಭಿವ್ಯಕ್ತಿಯಲ್ಲಿ ಕೂಡ ಸಮಾನ ಲಕ್ಷಣಗಳನ್ನು ಗುರುತಿಸಬಹುದು. ಕನ್ನಡ ನಾಡಿನಾದ್ಯಂತ ಇಂತಹ ಅನುಭವಿಗಳನ್ನು ಕಾಣುತ್ತೇವೆ.

"ಅನುಭಾವದ ಹಾಡುಗಳನ್ನು ನಮ್ಮ ನಾಡಿನ ಜನಪದರು ತುಂಬಾ ಆತ್ಮೀಯ ಹೃದಯದಿಂದ ಸ್ವಾಗತಿಸಿದರು, ಸ್ವಾಭಿಮಾನದಿಂದ ತಲೆ ಎತ್ತಿ ನಿಂತು, ಗೌರವಾಧಾರಗಳಿಂದ ಸ್ತುತಿಸಿದರು. ಓದು ಬರಹ

ಬಾರದ ಜನಪದರು ಶಾಶ್ವತವಾಗಿ ತತ್ವಪದಕಾರರನ್ನು ತಮ್ಮ ಬಾಳಿನ ಉಸಿರಾಗಿ, ಜೀವದ-ಜೀವಾಳವಾಗಿ, ಆತ್ಮದ ಚೇತನವಾಗಿ ಅನುಭಾವವಾಗಿ, ಅಪ್ಪಿಕೊಂಡರು, ಒಪ್ಪಿಕೊಂಡರು. ತಮ್ಮ ಸಂತಸದ ಬದುಕಿಗೆ ಜೀವಂತಿಕೆ ತಂದಿತ್ತ ಈ ಅನುಭಾವಗಳನ್ನು ಹೃದಯಾಂತಃಕರಣದಿಂದ ಹಾಡಿದರು. ತನು-ಮನ-ಭಾವ ತುಂಬಿ ಓಲಾಡಿದರು. ಜನಪದರ ಹೃದಯದಿಂದ ಮೂಡಿ ಹೊರ ಹೊಮ್ಮಿದ ಈ ತತ್ವಪದಗಳು ಲಾವಣಿಯಾಗಿ, ಹಂತಿಪದವಾಗಿ, ಬೀಸುಕಲ್ಲಿನ ಹಾಡಾಗಿ, ಗೀಗಿ ಪದಗಳಾಗಿ, ಭಜನಾ ಹಾಡುಗಳೆಂಬ ಪ್ರಕಾರಗಳಲ್ಲಿ ಅಭಿವ್ಯಕ್ತವಾದವು."[೨] ಅಲ್ಲದೆ ಸಂದರ್ಭಕ್ಕೆ ತಕ್ಕಂತೆ ಲಯ, ಧಾಟಿಗಳನ್ನು ಕೂಡಿಸಿ ನೀತಿ ಹೇಳುವ ಕೆಲಸ ಮಾಡಿದ ಉದಾಹರಣೆಗಳಿವೆ.

ಸಾಮಾನ್ಯವಾಗಿ ತತ್ವಪದಗಳನ್ನು, ಅನುಭಾವ, ಭಜನಾ ಹಾಡುಗಳೆಂದು ಕರೆಯುವುದು ರೂಢಿಯಲ್ಲಿದೆ. ಜನಸಾಮಾನ್ಯರು ಈ ತತ್ವಪದಗಳನ್ನು ತಮ್ಮ ಬಿಡುವಿನ ವೇಳೆಯಲ್ಲಿ ಹಾಡುತ್ತಾರೆ. ತಮ್ಮ ದಿನನಿತ್ಯದ ಕೆಲಸಗಳನ್ನು ಮುಗಿಸಿಕೊಂಡು ಮೇಲೆ ವಿಶೇಷವಾಗಿ ಸಂಜೆ ದೇವಸ್ಥಾನ, ಚಾವಡಿ, ಊರಿನ ಹಿರಿಯರ ಮನೆಯ ಹೊರ ಕಟ್ಟೆಯ ಮೇಲೆ ದೊಡ್ಡ ದೊಡ್ಡ ಗಿಡಗಳ ಕೆಳಗೆ ಕುಳಿತು ಹಾಡುತ್ತಾರೆ. ಕೆಲವು ವಿಶೇಷ ಸಂದರ್ಭಗಳಲ್ಲಿ ಪರ ಊರುಗಳಿಗೂ ಹೋಗಿ ತಮ್ಮ ಅನುಭವದ ಈ ಹಾಡುಗಳನ್ನು ಹಾಡುವುದರ ಜೊತೆಗೆ ಅಲ್ಲಿನ ಸ್ಥಳೀಯ ಭಜನಾ ಮಂಡಳಿಗಳ ಮೆಚ್ಚುಗೆ ಪಡೆದು ಅವರ ಹಾಡುಗಳನ್ನು ಇವರು ಬಳಸುತ್ತಾರೆ. ಇಲ್ಲಿ ಪರಸ್ಪರ ಎರಡು ಗುಂಪುಗಳು ಹಾಡುಗಳನ್ನು ವಿನಿಮಯಗೊಳಿಸುತ್ತಾರೆ. ಹೊಸ ಹೊಸ ದಾಟಿ(ಶೈಲಿ)ಗಳನ್ನು ಅಳವಡಿಸಿಕೊಳ್ಳುತ್ತಾರೆ.

ಹಬ್ಬ-ಹರಿದಿನಗಳಲ್ಲಿ ಹಾಡುವುದರ ಜೊತೆಗೆ, ಕೆಟ್ಟ ಪರಿಸ್ಥಿತಿ, ಸಾವಿನ ಸಂದರ್ಭದಲ್ಲಿಯೂ ತತ್ವಪದಗಳನ್ನು ಹಾಡಿ ನೊಂದ ಮನಸ್ಸುಗಳಿಗೆ ಸ್ವಾಂತನ ನೀಡುತ್ತಾರೆ. "ತಮ್ಮ ಜೀವನದ ಅನುಭವಗಳನ್ನು, ಅನುಭಾವ ಮಾಡಿಕೊಂಡು ನುಡಿದಂತೆ ನಡೆದು ಪದ ಕಟ್ಟಿ ಹಾಡಿ ತಾವು ಕಂಡುಂಡ ಸತ್ಯದ ಅನುಭವಗಳನ್ನು ಪದಕಟ್ಟಿ ನೀತಿಯ ಮೂಲಕ ತೋರಿಸಿದ್ದರಿಂದಲೇ ಅನುಭಾವಿಗಳಾದರು. ಆ ಅನುಭವ ಯಾರಿಗೂ ತಿಳಿಯಲಾರದು ಅನುಭವಿಸಿದ, ಅನುಭವಿಸಲು ಹಾತೊರೆಯುವವರಿಗೆ ಮಾತ್ರ ಗೊತ್ತು! ಜೀವಾತ್ಮ-ಪರಮಾತ್ಮನೊಂದಿಗೆ ಸಮರಸಗೊಂಡು ಒಂದು ಅನುಭವಾಗುತ್ತದೆಯಲ್ಲ ಅದೇ ಅಮೃತತತ್ವ. ಈ ಜೀವಾತ್ಮ-ಪರಮಾತ್ಮ-ಅಮೃತತತ್ವಗಳಿಂದ ಮುಕ್ತಿ ಪಡೆಯಲು ಸಾಧ್ಯವಾಗುತ್ತದೆ. ಅದು ಅನುಭವದಂತಹ ಮಾರ್ಗದಿಂದ ಮಾತ್ರ ಸಾಧ್ಯ.[೩]" ಅನುಭಾವ ಎನ್ನುವುದು ಮೂಕ ಮೆದ್ದ ಬೆಲ್ಲದಂತೆ ಅದರ ರುಚಿ ಅನುಭವಿಸಿದವನಿಗೆ ಗೊತ್ತಾಗುತ್ತದೆ.

ಇಂದು ತತ್ವಪದಗಳು ಶಿಷ್ಟಸಂಸ್ಕೃತಿಗೆ ಸೇರಿಸಬೇಕೆ, ಜನಪದ ಸಂಸ್ಕೃತಿಗೆ ಸೇರಿಸಬೇಕೆ ಎಂಬುದೇ ವಿದ್ವಾಂಸರಿಗೆ ದೊಡ್ಡ ಪ್ರಶ್ನೆಯಾಗಿದೆ. ತತ್ವಪದಗಳು ಗ್ರಂಥಸ್ಥ ರೂಪದಲ್ಲಿ ಮಾಡಲಿಲ್ಲ. ಅವು ಸರಳವಾಗಿ ಯಾವ ನಿರ್ಬಂಧಗಳಿಲ್ಲದೆ ಬದುಕಿನ ತಿಳುವಳಿಕೆಯನ್ನು ಅರಿಯಲು ಸಾಧ್ಯವಿದೆ ಎಂಬುದನ್ನು ಪ್ರತಿಪಾದಿಸುವಂಥದ್ದು. ತತ್ವಪದಗಳಿಗೆ ನಿರ್ದಿಷ್ಟ ಭಾಷೆಯ ಅವಶ್ಯಕತೆಯಿಲ್ಲ ಆಯಾ ಪ್ರದೇಶದ ಪ್ರಾದೇಶಿಕ ಭಾಷಾ ಶೈಲಿಯಲ್ಲಿ ಸರಳವಾಗಿ ಹಾಡಲ್ಪಡುತ್ತದೆ. ಶಿಷ್ಟ ಸಾಹಿತ್ಯ ಮಾರ್ಗ ಕ್ರಮೇಣ ಮಾಡಿ ಸೋತು ನಿಂತಾಗ ಅದಕ್ಕೆ ಪ್ರೇರಕ ಶಕ್ತಿಯನ್ನು ತುಂಬಿ ಮುನ್ನಡೆಸುವುದು ಜನಪದ ಭಾಷೆಯೇ. ಅಂತಲೇ ಶಿಷ್ಟಕಾವ್ಯಗಳು

ಸೋತಾಗ ಜನಪದ ಕಾವ್ಯಗಳೇ (ತತ್ವಪದ) ತಾಯಿಯ ಸ್ಥಾನದಲ್ಲಿ ನಿಂತು ಅವುಗಳಿಗೆ ಮತ್ತೇ ನವಚೈತನ್ಯ ನೀಡುತ್ತವೆ. ಅಂತಹ ಸಾಲಿನಲ್ಲಿ ತತ್ವಪದ ಸಾಹಿತ್ಯದ ಪ್ರಕಾರವು ಒಂದು.

ತತ್ವ ಮತ್ತು ನೀತಿಬೋಧ ಪ್ರಧಾನವಾದ ಇವು ಈಕಡೆ ಶುದ್ಧ ಜನಪದವೂ ಅಲ್ಲ, ಆಕಡೆ ಶಿಷ್ಟ ಪದವು ಅಲ್ಲ, ಹಳ್ಳಿ ಹಳ್ಳಿಗಳಲ್ಲಿ ಮುದ್ರಿಕೆ ಬದಲಿಸಿಕೊಳ್ಳುತ್ತ ಕರ್ತೃ ಸಂದೇಹ ಪ್ರಚಾರದಲ್ಲಿರುವ ಈ ಹಾಡುಗಳಲ್ಲಿ ಜನಪದ ಸಾಹಿತ್ಯದ ಮುಖ್ಯ ಲಕ್ಷಣವಾದ ಪಾಠ ವ್ಯತ್ಯಾಸ, ಲೆಕ್ಕ ಪ್ರಮಾಣದಲ್ಲಿ ನಿರಾತಂಕವಾಗಿ ನಡೆದಿರುತ್ತದೆ. ದಾಸರ ಕೀರ್ತನೆ, ಸರ್ಪಭೂಷಣ ಶಿವಯೋಗಿ, ಶಿಶುನಾಳ ಶರೀಫ, ಕಡಕೋಳ ಮಡಿವಾಳಪ್ಪ, ಕೂಡಲೂರು ಬಸವಲಿಂಗ ಶರಣರ ಹಾಡುಗಳ ಮಾದರಿಯಲ್ಲಿ ಕೆಲವು ಸಲ ಸಿನಿಮಾ ಅಥವಾ ನಾಟಕ ಹಾಡುಗಳ ದಾಟಿಯಲ್ಲಿ ಹುಟ್ಟುವ ಸಾಹಿತ್ಯವಿದು ಎಂಬುದಾಗಿ ಅಭಿಪ್ರಾಯಪಡುತ್ತಾರೆ. ಇಂತಹ ಪ್ರಮುಖರ ಸಾಲಿನಲ್ಲಿಯೇ ಕೆಲಸ ಮಾಡಿದ ಮುರುಘೇಂದ್ರರು ಕೂಡ ಒಬ್ಬರು.

ಸುಮಾರು ೧೫ನೇ ಶತಮಾನದಿಂದ ಇಲ್ಲಿಯವರೆಗೂ ಕಂಡುಬಂದ ತತ್ವಪದಕಾರರನ್ನು ಈ ಮೂರು ವರ್ಗಗಳಿಂದ ಬಂದವರಾಗಿದ್ದಾರೆ.

೧. "ಓದಿಕೊಂಡವರು ಸನ್ಯಾಸಿಗಳು, ಮಠದ ಅಧಿಪತಿಗಳು ಅನುಕೂಲಸ್ಥರೂ ಆದ ಕವಿಗಳು- ಇವರು 'ಕೈವಲ್ಯ-ಪದ್ಧತಿ'ಗಳಂತಹ ಕೃತಿಗಳನ್ನು ರಚಿಸುತ್ತಾರೆ. ಶಿವನ ಮತ್ತು ಗುರುವಿನ ಸ್ತುತಿ, ಆಧ್ಯಾತ್ಮಿಕ ಅನುಭಾವದ ದಟ್ಟಛಾಯೆ ಇವರ ಪದಗಳಲ್ಲಿ ಕಾಣುತ್ತದೆ.

೨. ಮೊದಲು ಸಂಸಾರಿಗಳಾಗಿದ್ದು, ನಂತರ ಕೌಟುಂಬಿಕ ತೊಂದರೆಗಳಿಂದಾಗಿ ಮನೆಬಿಟ್ಟು ದೂರಾಗಿರುತ್ತಾರೆ. ಅನಿವಾರ್ಯವಾಗಿ ಕಾವಿವೇಷ ಧರಿಸಿಕೊಂಡು, ಕೈಯಲ್ಲಿ ಏಕತಾರಿ ಹಿಡಿಯಬೇಕಾದ ಪ್ರಸಂಗಗಳಿಗೆ ಗುರಿಯಾಗುತ್ತಾರೆ. ಇವರಿಗೆ ಕಾಡುವ ಪ್ರಶ್ನೆಗಳೇ ಸಂಸಾರ ಮತ್ತು ದೇಹಗುಣಗಳು: ಈ ವರ್ಗದ ಜನ ರಚಿಸಿದ ಹಾಡುಗಳನ್ನೇ ನಾವು ತತ್ವಪದಗಳೆಂದು ಕರೆಯಬಹುದು.

೩. ಉತ್ತಮ ಸಂಸಾರಿಗಳು, ಹಳ್ಳಿಗಳಲ್ಲಿ ಹೆಂಡರು ಮಕ್ಕಳೊಂದಿಗೆ ಜೀವಿಸುತ್ತಿದ್ದು ಇವರು ಒಂದನೇ ಹಾಗೂ ಎರಡನೆ ಗುಂಪಿನ ಜನ ಸೃಷ್ಟಿಸುವ ಪದಗಳ ನಮೂನೆಯ ಕೆಲ ಹಾಡುಗಳನ್ನು ಬರೆದರೂ ಮುಖ್ಯವಾಗಿ ಇವರು ಚರಿತ್ರೆ, ವ್ಯಕ್ತಿ ಮಹಿಮೆ, ಪ್ರಸ್ತುತ ಬದುಕಿನ ಸಮಸ್ಯೆ ಮುಂತಾದವುಗಳನ್ನು ಕುರಿತು ಹಾಡುಗಳನ್ನು ಬರೆದಿರುತ್ತಾರೆ. "ಇವರಿಂದಾಗಿಯೇ 'ಅನುಭಾವ' ಪದಗಳಿಗೆ 'ಭಜನೆಯ ಹಾಡು'ಗಳು ಎಂಬ ಹೆಸರು ಪ್ರಚಲಿತಕ್ಕೆ ಬಂದದ್ದು."[೫]

ಈ ಮೇಲಿನ ಮೂರು ವರ್ಗಗಳಲ್ಲಿ ಮುರುಘೇಂದ್ರಸ್ವಾಮಿಗಳು ಮೂರನೆಯ ಗುಂಪಿನವರಲ್ಲಿ ಕಂಡುಬರುತ್ತಾರೆ. ತತ್ವಪದಗಳನ್ನು ಹಾಡುತ್ತಾ ಊರಿಂದ ಊರಿಗೆ ಅಲೆಯುವ ಇವರು ಏಕತಾರಿ ಮತ್ತು ಚಿಟಗಿಯನ್ನು ಬಳಸುತ್ತಿದ್ದ ಅನುಭಾವಿಗಳಿಗೆ ಈ ವಾದ್ಯ ಪರಿಕರಗಳು ಅನುಭಾವಗಳನ್ನು ಹೊರಹೊಮ್ಮಿಸುವ ವಿಧಾನವಾಗಿದೆ. ಯೋಗಿಯೊಬ್ಬ ತನ್ನ ಶರೀರದಲ್ಲಿ ಮಿಡಿಯುವ ನರನಾಡಿಗಳನ್ನು ಗಮನಿಸಬಲ್ಲ, ಪ್ರಾಕೃತಿಕವಾಗಿ

ಹೊರಹೊಮ್ಮುವ ಗಾಯನ ಸ್ವರೂಪವನ್ನು ಅದರೊಡನೆ ಆಧ್ಯಾತ್ಮಗೊಳಿಸುವ ಸಹಜತೆಯನ್ನು ಪಡೆಯಬಲ್ಲ. ಹೀಗಾಗಿ ವಾದ್ಯಗಳು ಸದಾ ದೇಹ ಮನಸ್ಸುಗಳೆರಡರ ಸಂಗಮ, ತತ್ವಪದಕಾರರು ತಾವು ನುಡಿಸುವ ಏಕತಾರಿಯನ್ನು ದೇಹಕ್ಕೆ ಹೋಲಿಸುತ್ತಾರೆ.

ತತ್ವಪದ ಹಾಡುವಾಗ ಬಳಸುವ ವಾದ್ಯ ಪರಿಕರಕ್ಕಿರುವ ಅವರ ಜ್ಞಾನದ ಹೋಲಿಕೆ ಹೀಗಿದೆ. "ಮೂರು ಅಥವಾ ನಾಲ್ಕು ಅಡಿಗಳಷ್ಟು ಉದ್ದದ ಬಿದಿರಿನಗಳುವೇ ದೇಹ, ಕುಂಬಳ (ಸೋರೆ)ಕಾಯಿಯ ಒಣ ಬುರುಡೆಯೇ ತಲೆ, ಇದರಲ್ಲಿ ಬಂಧಿತವಾದ ತಂತಿಯೇ ಜೀವ, ಇದರಿಂದ ಮೂಢಿಬರುವ ಧ್ವನಿಯೇ ಉಸಿರು ಎಂಬ ಸಾಂಕೇತಿಕ ಕುರುಹು ತತ್ವಪದಕಾರರದು.

## ಮುರುಘೇಂದ್ರಸ್ವಾಮಿ ವಿರಚಿತ ನಿಜಾನಂದ ಕೈವಲ್ಯದಲ್ಲಿನ ತತ್ತ್ವಪದಗಳು

### ೧.೧ ಸ್ತುತಿ ಹಾಡುಗಳು

ಮನುಷ್ಯ ಸ್ವಾಭಾವಿಕವಾಗಿ ಆಧ್ಯಾತ್ಮ ಶರಣ, ಅವನಿಗೆ ನಂಬಲು ಆಚರಿಸಲು ಧರ್ಮ ಲೋಪವಾದ್ದರಿಂದ ಅವನೀಗ ದಿಕ್ಕು ಕಾಣದಾಗಿ ನಾನಾ ವಿಧ ರಾಜಕೀಯ ಮತ್ತು ಲೌಕಿಕ ಸಾಂತ್ವಾನಗಳಿಗೆ ಜೋತು ಬೀಳುತ್ತಿದ್ದ. ಹೀಗಾಗಿ ಇಂದಿನ ಜಗತ್ತಿನಲ್ಲಿ ಎಲ್ಲ ಕಲಬೆರಕೆಯಾಗಿ ಹೋಗಿದೆ. ಸರಿಯಾದ ಅಡಿಪಾಯದ ಮೇಲೆ ಧರ್ಮ ಪುನಃ ಪ್ರತಿಷ್ಠೆಯಾದಲ್ಲಿ ಇದು ಸರಿ ಹೋಗಿ ಶಾಂತಿ ಬೇರೂರಬಹುದು. ಅದರ ಹೊರತು ಬರಿಯ ಬುದ್ಧಿಯ ಒಲುಮೆಯಿಂದ ಯಾವುದೂ ಸಾಧಿತವಾಗುವುದಿಲ್ಲ. ಬುದ್ಧಿಗಿಂತ ಮನಃಪೂರ್ವಕವಾದ ನಂಬಿಕೆಯಿದೆ, ವಿಶ್ವಾಸದಿಂದ ಒಬ್ಬ ಇನ್ನೊಬ್ಬನನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬಲ್ಲ. ಇಂತಹ ನಂಬಿಕೆಯೇ ಧರ್ಮಕ್ಕೆ ಮೂಲಾಧಾರ, ನಂಬಿಕೆ ಮತ್ತು ವಿಶ್ವಾಸ ಬೆಳೆದು, ಬಲಿತು, ಸರ್ವಶಕ್ತನಾದ ಭಗವಂತನಲ್ಲಿ ಹೋಗಿ ನಿಲ್ಲುವುದೇ ಜಗತ್ತಿನ ಎಲ್ಲ ಧರ್ಮಗಳ ರಹಸ್ಯ ಧರ್ಮಬಾಹಿರ ಜೀವನ ಪೂರ್ಣವಲ್ಲ, ಅದು ಬರಿದೆಂದೆನಿಸುವುದು. ದಿನಗಳುರುಳಿದಂತೆ ಆಜ್ಞೇಯವೆಂದುಕೊಂಡಿದ್ದನ್ನು ತಿಳಿದುಕೊಳ್ಳಬೇಕೆಂಬ ಆಸೆ ಹೆಚ್ಚುವುದೇ ಹಿತವಾದುದು. ಮನುಷ್ಯನಿಗೆ ತನ್ನಲ್ಲಿಯ ದೋಷ, ಜಗತ್ತಿನಲ್ಲಿಯ ತಮೋಗುಣದ ಬಗ್ಗೆ ಬಹಳ ಆಶ್ಚರ್ಯವಾಗುವುದು.

ಇದನ್ನು ನಿವಾರಿಸಲು ಅವನು ಅಸಮರ್ಥನಾಗಿರುವನು. ತನ್ನ ಅಲ್ಪತೆಯ ಬಗ್ಗೆ ಅವನಿಗೆ ಅರಿವುಂಟಾದಾಗಲೇ ಭಗವಂತನ ಕಡೆಗೆ ಮನಸ್ಸು ಧಾವಿಸುವುದೆಂದು ಧರ್ಮಪುರುಷರು ಹೇಳಿರುವರು. ತನ್ನ ಈ ಬಗೆಯ ಅಲೆದಾಟದಲ್ಲಿ ಯಶಸ್ಸು ಸಿಕ್ಕಬಹುದೆಂದು ಅವನಿಗೆ ಅನಿಸುವುದು, ಅದು ಬಿಟ್ಟು ಬರಿಯ ಬುದ್ಧಿ ಮತ್ತೆಯಿಂದ ಉನ್ಮತ್ತನಾದಲ್ಲಿ ಜ್ಞಾನವಾಗಲಿಕ್ಕಿಂತ ಅವನನ್ನು ಅನನ್ಯ ಶರಣರಾಗಿ, ದಾಸರಾಗಿ ಭಜಿಸಿದರೆ ಅವನು ಒಲಿಯಬಹುದು.

ಅಂತಲೇ ಮುರುಘೇಂದ್ರಸ್ವಾಮಿಗಳು ಬಹುದೇವತಾ ಆರಾಧಕರಾಗಿ ಗಣಪತಿ, ಶಿವ, ಅಂಭಾಭವಾನಿ, ಪುರಂದರವಿಠಲ, ನಾರಾಯಣರನ್ನು ಕುರಿತು ಸ್ತುತಿ ಪದ್ಯಗಳನ್ನು ಹಾಡಿದ್ದಾರೆ.

ಪ್ರತಿಯೊಬ್ಬ ಜನಪದ ಕವಿಗಳ ಮತ್ತು ಶಿಷ್ಟ ಕವಿಗಳು ತಮ್ಮ ಕೃತಿಗಳನ್ನು ಪ್ರಾರಂಭಿಸುವ ಆದಿಯಲ್ಲಿ ದೇವರ ಸ್ತುತಿ ಮಾಡುವುದು ಕಂಡು ಬರುತ್ತದೆ. ಹಾಗೆಯೇ ಮುರುಘೇಂದ್ರಸ್ವಾಮಿಗಳು ಸಹ ತಮ್ಮ ತತ್ವಪದ ಹಾಡುವುದಕ್ಕೆ ಮೊದಲು ಗಣಪತಿಯ ಸ್ತೋತ್ರ ಮಾಡುತ್ತಾರೆ. ವಿಘ್ನೇಶ್ವರನನ್ನು ನೆನೆಯುವುದರಿಂದ ಯಾವುದೇ ವಿಘ್ನಗಳು ಬರುವುದಿಲ್ಲವೆಂದು ನಂಬಿಕೆ ಇಲ್ಲಿದೆ.

"ಶ್ರೀ ಗಣನಾಯಕನೆ ಶರಣು ಶರಣು
ಶರಣು ಪಾಹಿಮಾಂ ಗಿರಿಜಾತೆ ನಂದನ
ಮೂಷಕ ವಾನನೆ ಸುರಪೋಷಕ ನಿನ್ನಾಶಿಸಿರುವೆ
ಪೋಷಿಸೆನ್ನ ಕ್ಲೇಶರಹಿಸೆಯೀಶಗೂಸೆ ಪಾಹಿಮಾಂ"[*]

ಕವಿ ಇಲ್ಲಿ ಗಣಪತಿಯನ್ನು ನಾನಾ ಹೆಸರುಗಳಿಂದ ಕರೆದು, ನಿನ್ನ ದಿವ್ಯ ಪಾದಗಳನ್ನೆ ನಂಬಿರುವೆ, ಮನುಷ್ಯನಾಗಿ ಹುಟ್ಟಿದ ಮೇಲೆ ಒಂದಲ್ಲದೇ ಹಲವು ಕಷ್ಟಗಳು ಬರುತ್ತವೆ ಅವುಗಳನ್ನೆಲ್ಲ ನಿವಾರಿಸುವಂತೆ ನನ್ನನ್ನು ಸಲಹು ತಂದೆ ಎಂದು ಪ್ರಾರ್ಥಿಸಿಕೊಂಡಿದ್ದಾನೆ.

### ೧.೨ ಶಿವಸ್ತುತಿ

ಪರಮಾತ್ಮನ ಅನಂತಗುಣಗಳನ್ನು ಎಣಿಸುವುದು ಅವಶ್ಯಕವು, ಅವನು 'ಸತ್' 'ಸತ್ಯಂ' ಅಂದರೆ ಸ್ವತಂತ್ರವಾದ ಸತ್ಯತ್ವವುಳ್ಳವನು. 'ಜ್ಞಾನಂ' 'ಚಿತ್' ಅಂದರೆ ಜ್ಞಾನರೂಪಿ, ಜ್ಞೇಯ-ಮುಖಜ್ಞೇಯ ವಸ್ತ್ರ, 'ಆನಂದ' 'ಅನಂತ' ಆನಂದರೂಪಿ, ನಿತ್ಯವಾದ ಚೇತನರುಗಳಿಗೆ ನಿತ್ಯತ್ವಪ್ರದ. ಆದ್ದರಿಂದಲೆ ನಿತ್ಯರೊಳುನಿತ್ಯ, ಚೇತನಗಳು ಚೇತನ ಅವನ ರೂಪ, ಗುಣ ಕ್ರಿಯಾ ಎಲ್ಲ ಅನಂತ ಆದ್ದರಿಂದಲೆ ಅವನನ್ನು ಸಂಪೂರ್ಣವಾಗಿ ತಿಳಿಯುವುದು ಯಾರಿಗೂ ಶಕ್ತವಿಲ್ಲ. ಅಂತೆಯೆ ಅವನು ಅಪ್ರಮೇಯ ಶೃತಿವಾಕ್ಯಗಳೂ ಅವನನ್ನು ಸ್ತುತಿಸಲಾರದೆ ಹಿಂದಿರುಗುವುವು. ಅವನು ಇಲ್ಲಿ, ಅಲ್ಲಿ, ಎಲ್ಲೆಲ್ಲೂ ಇರುವನು, ಸರ್ವತ್ರವ್ಯಾಪ್ತಿ, ಅವನು ದೇಶ-ಕಾಲಗಳಿಗೂ ಸ್ವಾಮಿ. ಅವನು ಸಕಲ ಚರಾಚರ ಜಗತ್ತಿಗೂ ಒಡೆಯ ಅಂದರೆ ಇದನ್ನು ಸೃಷ್ಟಿಸಿ, ಸಂರಕ್ಷಣೆಮಾಡಿ, ಸಂಹಾರ ಮಾಡುವವನೂ ಅವನೇ. ಇಷ್ಟೇ ಅಲ್ಲ; ಸೃಷ್ಟಿ, ಸ್ಥಿತಿ, ಸಂಹಾರ ನಿಯಮನ, ಜ್ಞಾನ, ಅಜ್ಞಾನ, ಬಂಧ ಮತ್ತು ಮೋಕ್ಷಗಳೆಂಬ ಜಗತ್ತಿನ ಎಂಟು ಧರ್ಮಗಳೂ ಪರಮಾತ್ಮನಿಂದಲೆ ಆಗುವುವು.

ಶಿವ-ಶಕ್ತಿ, ಜೀವ, ಜಗತ್ತು, ಮುಕ್ತಿ ಇವು ಸಮಷ್ಟಿ ತತ್ವಗಳು, ವೀರಶೈವ ಸಿದ್ಧಾಂತದಲ್ಲಿ ಶಿವನು ಬ್ರಹ್ಮಪದವಾಚ್ಯನು, ಅವನು ಸಕಲ ಜಗತ್ತಿಗೆ ಮೂಲ ಕಾರಣನಾದ ಪರಶಿವನು 'ಮೂಲೋಕ ವೆಂಬುದೊಂದು ಐಸಿರಿ', ಮದುವೆ ಚಿತ್ತರ ಅದನ್ನು ಬರೆವ ಭಿತ್ತಿಯೇ ಬ್ರಹ್ಮ, ಆ ಬ್ರಹ್ಮವೇ ಸಚ್ಚಿದಾನಂದ ಸ್ವರೂಪವನ್ನು ಶಿವನೆ 'ಜ್ಞಾನಮೃತದ ಮಹೋದದಿ', ಮುವತ್ತಾರು ತತ್ವಂಗಳೆ ಆ ಮಹೋದಧಿಯ ನೀರ್ತೆರೆ, ನಿರ್ಬೊಬ್ಬುಳಿಗಳು, ಆತನು ಚಿದ್ರೂಪನು ನಿರ್ಮಲನು ತ್ರಿಗುಣಾತೀತನಾದ ಆತನ ಬೆಳಗಿನಿಂದಲೇ ಈ ವಿಶ್ವವು ಬೆಳಗುವುದು ಜೀವ ಜಗತ್ತುಗಳಿಗೆ ಮೂಲಾಧಾರ ಜಗದೀಶ್ವರನು, ಆತನು ಮಾತಿಗಲೇತನು, ಮನಕ್ಕಲೇತನು ಕಣ್ಣಿಗೆ ಕಾಣುವುದಿಲ್ಲ,

ಖಂಡಿಸುವ ಸಾಮರ್ಥ

ಖಂಡಿತಾ ಖಂಡವಾಸ ಮಹೇಶ"[೮]

ಎಂದು ಪಂಢರಪುರದ ಪುರಂದರ ವಿಠಲನನ್ನು ಪ್ರಾರ್ಥಿಸಿಕೊಂಡಿದ್ದಾರೆ. ಮುರುಘೇಂದ್ರಸ್ವಾಮಿಗಳು ಹುಟ್ಟಿದ ಗೌಡಗಾಂವ ಗ್ರಾಮ ಮಹಾರಾಷ್ಟ್ರಕ್ಕೆ ಹತ್ತಿರವಾದ್ದರಿಂದ ಇವರ ಮೇಲೆ ಪಂಢರಪುರದ ನೆರಳು ಬಿದ್ದಿದೆ.

"ಪಾಪಲೋಪ ವಿಠಲ ಗೋಪಾಲ

ನೀಪಾರಮಹಿಮಾ ವ್ಯಾಪಕನಾಮ

ಆಪದದೂರ ಶ್ರೀಪತಿಲೋಲ

ಕಾಪಾಡು ಸುಶೀಲ"[೯]

ನಾನು ಮಾಡಿರುವ ಪಾಪಗಳನ್ನು ಮನ್ನಿಸಿ ಆಪತ್ತುಗಳನ್ನು ದೂರಮಾಡು. ಬೇಡುವ ಭಕ್ತರಿಗೆ ವರಕೊಡುವುದೆಂದರೆ ನಿನಗೆ ಬಲು ಇಷ್ಟ. ನನಗೂ ವರ ನೀಡಿ ಉದ್ದಾರ ಮಾಡು. ನಾನು ಬೇಡುವ ವರ ಭ್ರಾಂತರಹಿತವಾದ ನಿಶ್ಚಿಂತ ನಿರ್ಗುಣ ನೀ ನನಗೆ ದಯಮಾಡಿಸು. ನಿನಗೆ ಹಲವು ಹೆಸರುಗಳು, ಸ್ಥಳಗಳು ಇವೆ. ಯಾರೇ ಭಕ್ತರು ಕಷ್ಟದಲ್ಲಿದ್ದರೆ ಅವರನ್ನು ಕಾಪಾಡು. ಶೇಷ(ಹಾವು)ದ ಮೇಲೆ ಮಲಗಿದ್ದರೂ ನಿನಗೆ ಎಲ್ಲ ಆಗುಹೋಗುಗಳು ತಿಳಿದಿರುತ್ತವೆ.

"ಸದಾಕಾಯೋ ಪಂಢರಪುರವಾಸಿ

ಮದದಿಂದ ನಮಿಪೆ ವಿಠಲೇಶ

ತಿಳಿಯದು ನಿನ್ನಯ ಲೀಲೆಯು ಸದಯ

ವ್ಯಾಳಗ್ಯೆಯದೆ ಬಾಲ ಪೋಷ

ಪರರೆಸಿತಿನ್ನೆಯ ಈ ರೀತಿಗ್ಯೆದಿಯಾ

ಅರಿಯದವನ ಮರಿಯದಿ ಕಾಯೋಯೀಶ"[೧೦]

ನಾವು ಕಷ್ಟದಲ್ಲಿದ್ದರೆ ಯಾರು ನಮಗೆ ಸಹಾಯ ಮಾಡುವುದಿಲ್ಲ. ಕೊನೆಗೆ ದೇವರ ಕೃಪೆಯು ನಮಗೆ ಲಭಿಸುವುದಿಲ್ಲ.ದೇವರು ನಮ್ಮ ಮೇಲೆ ಕೃಪೆ ತೋರದಿದ್ದರೆ ಸಾಮಾನ್ಯವಾಗಿ ನಾವು ದೇವರನ್ನೇ ಬೈಯುವ ಸ್ಥಿತಿಗೆ ಹೋಗುತ್ತೇವೆ. ನಾವು ಮಾಡಿದ ಕರ್ಮಗಳ ಮೇಲೆ ನಮ್ಮ ಪಾಪ ಪುಣ್ಯಗಳು ನಿರ್ಧಾರವಾಗಿ ಪಾಪ ಹೆಚ್ಚಾಗಿದ್ದರೆ ದೈವವು ನಮ್ಮ ನೆರವಿಗೆ ಬರುವುದಿಲ್ಲ. ನಮ್ಮಲ್ಲಿ ಅಷ್ಟಮದಗಳು ಹೆಚ್ಚಾದಾಗ ತನ್ನಷ್ಟಕ್ಕೆ ತಾನೆ ಅಧೋಗತಿ ಹೊಂದುತ್ತಾನೆ. ಮದದಿಂದ ದೇವರನ್ನು ನೆನೆಯಲಿಲ್ಲವೆಂದು

ಹೀನ ಪರಿಸ್ಥಿತಿ ಉಂಟಾಗುತ್ತದೆ. ಆದ್ದರಿಂದ ಗೋಪಾಲ ಆಕಳುಗಳನ್ನು ಕಾಯುವಂತೆ ವಿಠಲ ನಮ್ಮನ್ನು ಸದಾ ಕಾಯುತ್ತಿರಲಿ.

**೧.೩ ಶಕ್ತಿಯ ಪದ**

ಪ್ರಕೃತಿಯ ರಮ್ಯ ಮಡಿಲಲ್ಲಿ ಜೀವವಿಕಾಸ ಹೊಂದುತ್ತಾ ಬೆಳೆದ ಮನುಷ್ಯ, ಆರಂಭದಿಂದಲೂ ಒಂದು ಅಗೋಚರವಾದ ಶಕ್ತಿ ಇದೆ ಎಂಬ ನಂಬಿಕೆಯಲ್ಲಿಯೇ ಬೆಳೆಯಲಾರಂಭಿಸಿದ. ಕ್ರಮೇಣ ಆ ನಂಬಿಕೆಗೆ ಮೂರ್ತ ರೂಪ ಕೊಡಲಾರಂಭಿಸಿದ. ನಮ್ಮ ಹಿಂದೂ ಪರಂಪರೆಯಲ್ಲಿ ಸ್ತ್ರೀ ದೇವತೆಗಳಿಗೆ ಹೆಚ್ಚಿನ ಮಹತ್ವ ಅವರು ಪುರುಷ ದೇವರುಗಳಿಗಿಂತ ಹೆಚ್ಚಿನ ಶಕ್ತಿ ಪಡೆದವರು ಎಂಬ ನಂಬಿಕೆ. ಆ ಶಕ್ತಿಯ ದೇವತೆಗಳ ಸಾಲಿಗೆ ಸೇರಿದವಳೇ ಅಂಬಾಭವಾನಿ.

ಮುರುಘೇಂದ್ರಸ್ವಾಮಿಯ ಹುಟ್ಟೂರಾದ ಗೌಡಗಾಂವ ಗ್ರಾಮ ತುಳುಜಾಪುರಿಗೆ ಹತ್ತಿರವಾಗಿರುವುದರಿಂದ ಅವರ ಮೇಲೆ ಅಂಬಾಭವಾನಿಯ ಪ್ರಭಾವವಾಗಿತ್ತು. ಅಂತಲೇ ಮುರುಘೇಂದ್ರ ಸ್ವಾಮಿಗಳು ಅಂಬಾಭವಾನಿಯನ್ನು ಕುರಿತು ಈ ರೀತಿಯಾಗಿ ಸ್ತುತಿಸಿರುವರು.

"ಅಂಬಾ ನೀ ದಯ ಪಾಲಿಸೆ
ಶಾಂಭವಿದೇವಿ ಸೌಂಬನೊಳಗೆ ಕಲಿಸೆ
ಅಂಬಾ ಪಾಲಿಸೆ ದಯ ನಂಬದ ಭಕುತರಿಗೆ
ಅಂಬರಾಗ್ರದಿ ಪ್ರೀತಿ ಬಿಂಬಾಧಾರ ತೋರಿ"[೧೧]

ಅಂಬಾಭವಾನಿ ಅಸಂಖ್ಯಾತ ಭಕ್ತರಿಂದ ಪೂಜಿಸಲ್ಪಡುವಳು. ಈ ದೇವತೆ ಮುನಿದರೆ ಸರ್ವನಾಶ. ಅದು ಮುಟ್ಟದ ಗಿಡವಿಲ್ಲ, ದೇವಿಯನ್ನು ಪೂಜಿಸದ ಜನರಿಲ್ಲ, ಅಂಬಾ ಎಂದರೆ ತಾಯಿ, ಭುವನ ಎಂದರೆ ಭೂಮಿ. ಇಡೀ ಭೂಮಂಡಲಕ್ಕೆ ತಾಯಿ ಎಂಬುದೇ ಅಂಬಾಭವಾನಿ ಹೆಸರಿನ ಅರ್ಥವಾಗುತ್ತದೆ. ಆದ್ದರಿಂದ ಎಲ್ಲರು ತಾಯಿ ಎಂದು ಇವಳನ್ನು ಪೂಜಿಸುತ್ತಾರೆ. ನಿಜವಾದ ಭಕ್ತರಿಗೆ ತಾಯಿ ಕಂಡರೆ, ದುಷ್ಟರಿಗೆ ಕಾಳಿಯಾಗಿ, ರುದ್ರಕಾಳಿಯಾಗಿ ಶಿಕ್ಷಿಸುತ್ತಾಳೆ. ಮುರುಘೇಂದ್ರಸ್ವಾಮಿಗಳು ಅಂಬಾಭವಾನಿಯನ್ನು ನೆನೆಯುತ್ತಾ ಶಕ್ತಿ ದೇವತೆಯಾದ ನೀನು ನರಮಾನವರನ್ನು ಕಾಪಾಡಿ ಜೀವನದಲ್ಲಿ ಅವರಿಗೆ ಸದ್ಬುದ್ಧಿಯನ್ನು ನೀಡಿ, ಭಕ್ತರಿಗೆ ಮುನ್ನಡೆಸು, ಸಕಲ ಭಕ್ತರಿಗೆ ಒಳ್ಳೆಯದಾಗಬೇಕಾದರೆ ಅಮ್ಮ ನಿನ್ನ ದಯೆ ಇರಬೇಕೆಂದು ಇಲ್ಲಿ ಸ್ತುತಿಸಿದ್ದಾರೆ.

ದೇವಿಯು ಅನೇಕ ಅವತಾರಗಳಲ್ಲಿ ಭಕ್ತರಿಂದ ಪೂಜಿಸಲ್ಪಡುವಳು, ಒಂದು ಕಡೆ ಸೌಮ್ಯ ಸ್ವಭಾವದ ದೇವತೆಯಾಗಿ ಆರಾಧನೆಗೊಂಡರೆ ಇನ್ನೊಂದು ಕಡೆಯಲ್ಲಿ ದುಷ್ಟರನ್ನು ಸಂಹರಿಸುವ ರುದ್ರ ದೇವತೆಯಾಗಿ ಕಾಣಿಸಿಕೊಳ್ಳುತ್ತಾಳೆ.

"ಮಹಾಂಕಾಳಿ ಮಹಾದೇವಿಯೆ ಮಾತೆ ಮಂಗಲಂ

ಮಹಾಂಕಾಳಿ ಮನೋಹರಿ ಶ್ರೀದಾತೆ ಮಂಗಲಂ

ಮಹಾಮಾಯಿಯ ಮಾತಂಗಿ ಮಂತ್ರಾದಿ ಮಂಗಲಂ"[೧೨]



ಬೇರೆ ಬೇರೆ ಜನಸಮುದಾಯಗಳಲ್ಲಿ ಕೆಲವರು ಮಹಾಕಾಳಿಯ ಹೆಸರಿನಲ್ಲಿನ ಪ್ರಾರ್ಥಿಸಿದರೆ ಇನ್ನೂ ಕೆಲವರು ಮಹಾದೇವಿಯ ರೂಪದಲ್ಲಿ ಪೂಜಿಸುವರು ಮಹಾದೇವಿಯ ರೂಪದಲ್ಲಿರುವ ದೇವಿ ಹಲವು ಹತ್ತಾರು ವಿಧಗಳಲ್ಲಿನ ನೈವೇದ್ಯಗಳನ್ನು ಅರ್ಪಿಸಿದರೆ, ಕಾಳಿಯ ರೂಪದಲ್ಲಿ ಪೂಜಿಸುವವರು ಪ್ರಾಣಿಗಳ ಬಲಿ ನೀಡಿ ನೈವೇದ್ಯ ಸಲ್ಲಿಸುತ್ತಾರೆ. ಇದರಂತೆ ಮಾತಂಗಿಯ ಮಂತ್ರದಿಂದ ಸ್ತುತಿಸಿದರೆ ಇನ್ನೂ ಕೆಲವರು ಹಲವು ತಂತ್ರಗಳಿಂದ ದೇವಿಯನ್ನು ಒಲಿಸಿಕೊಳ್ಳಲು ಇಷ್ಟಪಡುತ್ತಾರೆ.

ಒಟ್ಟಿನಲ್ಲಿ ಅನೇಕ ರೀತಿಯಲ್ಲಿ ತಾಯಿಯಾಗಿಯೇ ಮಕ್ಕಳನ್ನು ಸಲಹುವಳು ಆದರೆ ಇಂದಿನ ಭಕ್ತರು ತಮ್ಮ ಸ್ವಾರ್ಥಕ್ಕೆಂಬಂತೆ ಅನೇಕ ಹೆಸರುಗಳಿಂದ ಪ್ರಾರ್ಥಿಸುವರು ಒಮ್ಮೆ ಶಾರದೆಯಾದರೆ, ಇನ್ನೊಮ್ಮೆ ಮಹಿಷಾಸುರ ಮರ್ದಿನಿಯಾಗಿ, ಚಾಮುಂಡಿಯಾಗಿ ಪೂಜೆಗೊಳಲ್ಪಡುವಳು, ಇಲ್ಲಿ ಯಲ್ಲಮ್ಮ ದೇವಿಯನ್ನು ಮುರುಘೇಂದ್ರಸ್ವಾಮಿಗಳು ಈ ರೀತಿಯಾಗಿ ಸ್ತುತಿಸಿದ್ದಾರೆ.

"ಯಲ್ಲಮ್ಮ ಯಲ್ಲಮ್ಮ ನಿನ್ನಂಥ ದೇವರೆಲ್ಲಿಲ್ಲಮ್ಮಾ



ಬಲ್ಲಿದ ಶರಣರಿಗೊಲಿತಮ್ಮ ನೀಖುಲ್ಲರ ಹಲ್ಲು ಮುರಿದೆಮ್ಮ"[೧೩]

ಜನಪದ ಗ್ರಾಮದೇವತೆಗಳಲ್ಲಿ ಪ್ರಮುಖ ಸ್ಥಾನ ಪಡೆದವಳು ಯಲ್ಲಮ್ಮ ದೇವಿ. ನಮ್ಮ ಜನಪದರು ಎಲ್ಲರ ಅಮ್ಮ ಯಲ್ಲಮ್ಮ ಎಂಬ ಪವಿತ್ರ ಭಾವನೆಯಿಂದ ಅವಳನ್ನು ಆರಾಧಿಸುತ್ತಾರೆ. ಮುರುಘೇಂದ್ರಸ್ವಾಮಿಗಳು ಯಲ್ಲಮ್ಮ ದೇವಿಯನ್ನು ವಶಮಾಡಿಕೊಂಡಿದ್ದಾರೆಂಬ ಕಥೆ ಅವರ ಬದುಕಿನಲ್ಲಿ ಬರುತ್ತದೆ. ಯಲ್ಲಮ್ಮ ದೇವಿಯ ಹೆಸರಿನಲ್ಲಿ ಆಚರಿಸಲ್ಪಡುವ ದೇವದಾಸಿ ಪದ್ಧತಿ, ಬೆತ್ತಲ ಸೇವೆ, ಬಸವಿ ಬಿಡುವುದು, ಜೋಗತಿಯಾಗುವುದು ಇಂತಹ ಅನಿಷ್ಟ ಪದ್ಧತಿಗಳನ್ನು ತಮ್ಮ ಸ್ವಾರ್ಥಕ್ಕಾಗಿ ಆಚರಣೆಗೆ ತಂದ ಹೀನ ಪುರೋಹಿತ ವರ್ಗದವರನ್ನು ಕಠೋರವಾಗಿ ನಿಂದಿಸುತ್ತಾ 'ನೀ ಖುಲ್ಲರ ಹಲ್ಲು ಮುರಿದೆಮ್ಮಾ' ಎಂದು ತಮ್ಮ ವಾಣಿಯ ಮೂಲಕ ಮುರುಘೇಂದ್ರಸ್ವಾಮಿಗಳು ಖಂಡಿಸಿದ್ದಾರೆ.

ಸೃಷ್ಟಿಯ ಸಂದೇಶಗಳು ಮಹಾತ್ಮರ ವಾಣಿಯಿಂದ ಹೊರಹೊಮ್ಮುತ್ತವೆ ಎಂಬುದಕ್ಕೆ ಈ ಮೇಲಿನ ಸಾಲು ನಿದರ್ಶನವಾಗಿದೆ. ಭವ ಬದುಕಿನಲ್ಲಿ ಹುಟ್ಟಿ ಬಂದ ಮೇಲೆ ಹುಟ್ಟು ಮತ್ತು ಸಾವುಗಳ ಬಂಧನದಿಂದ ಮುಕ್ತವಾಗಿ ಮೋಕ್ಷವನ್ನು ಪಡೆಯಬೇಕಾದರೆ ಒಂದೇ ಮಾರ್ಗ, ಆ ಮಾರ್ಗವೇ ಭಕ್ತಿ ಮಾರ್ಗ. ಭಕ್ತಿಯಿಂದ ಭವಾನಿಯನ್ನು ಸ್ತುತಿಸುವುದು ಎಂದಿದ್ದಾರೆ. ಸಕಲರು ಸುಖ-ಸಂತೋಷದಿಂದ ಇರಬೇಕಾದರೆ ದೇವರ ಅನುಗ್ರಹ ಮತ್ತು ಕೃಪೆ ಮುಖ್ಯವಾಗಿದೆ ಅದಕ್ಕಾಗಿ ಯಾವಾಗಲೂ ಸನ್ಮಾರ್ಗದಲ್ಲಿ ನಡೆದು ದೇವರ ಕೃಪೆಗೆ ಪಾತ್ರನಾಗಬೇಕು. ದೇವರ ಕೃಪೆಗೆ ಪಾತ್ರವಾಗುವುದು ಅಷ್ಟು ಸುಲಭವಾದುದಲ್ಲ. ಅದಕ್ಕಾಗಿಯೇ ಬಸವಣ್ಣನವರು

ಭಕ್ತಿ ಎಂಬುದು ಗರಗಸದಂತೆ ಅದು ಹೋಗುತ್ತ ಕೊರೆಯುವುದು, ಬರುತ್ತಲೂ ಕೊರೆಯುವುದು ಎಂದಿದ್ದಾರೆ. ಕಠಿಣ ಮಾರ್ಗದಲ್ಲಿ ಸಾಗಿ ಭವಾನಿಯ ಕೃಪೆಗೆ ಪಾತ್ರರಾದ ಈ ಶರಣರು, ಭವಾನಿಯನ್ನು ಸಕಲರು ಸ್ತುತಿಸಿದರೆ ಅವರವರ ಕಷ್ಟಕಾರ್ಪಣ್ಯಗಳು ಮಾಯವಾಗಿ ಜೀವನದಲ್ಲಿ ಮಂಗಳವನ್ನುಂಟು ಮಾಡುವುದರಲ್ಲಿ ಸಂದೇಹವಿಲ್ಲ ಎಂಬ ವಾಣಿ ಜನರಿಗೆ ನೀಡಿದ್ದಾರೆ.

**೧.೪ ಸ್ಥಳೀಯ ದೇವರ ಸ್ತುತಿ**

ಮುರುಘೇಂದ್ರಸ್ವಾಮಿಗಳು ಏಕದೇವೋಪಾಸಕರಾಗಿರದೆ ಬಹುದೇವೋಪಾಸಕರಾಗಿ ತಮ್ಮ ಜೀವನದಲ್ಲಿ ತಮಗಿಷ್ಟ ಬಂದಂತೆ ಹಲವು ದೇವರುಗಳ ಸ್ತುತಿಗಳನ್ನು ಹಾಡಿದ್ದಾರೆ. ಕಲಬುರ್ಗಿ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳಿಗೆ ಶರಣಬಸವೇಶ್ವರನ ಹೆಸರು ಚಿರಪರಿಚಿತ. ಈತನನ್ನು ನೆನೆಯದ ಈ ಜಿಲ್ಲೆಯ ಕವಿಗಳೇ ಇಲ್ಲ. ಶರಣಬಸವೇಶ್ವರರ ಕುರಿತಾದ ಪವಾಡಗಳು, ಸ್ತುತಿಗಳು, ಸ್ತೋತ್ರಗಳು, ಅವರ ಆದರ್ಶಗಳು ಜನಸಾಮಾನ್ಯರಿಗೂ ಮುಟ್ಟಿಸುವ ಕೆಲಸ ತತ್ವಪದಗಳ ಮೂಲಕ ಮಾಡಿದ್ದು ಕಾಣುತ್ತೇವೆ. ಹಾಗೆಯೇ ಮುರುಘೇಂದ್ರ ಸ್ವಾಮಿಯು ಹೊರತಾಗಿಲ್ಲವೆಂದು ಹೇಳಬಹುದು.

"ಶರಣ ಬಸವ ಕರುಣಿಸೊ ಶಿವ

ಪರಮ ನೀಶವತಾರನೆ

ಪರಿಪರಿಯಲಿ ಚರಣ ಸ್ಮರಿಸುವೆ"[೧೪]

ಮುರುಘೇಂದ್ರಸ್ವಾಮಿ ಬೇಕಂತಲೇ ಬಹುದೇವತಾ ಆರಾಧನೆ ಮಾಡುತ್ತಿರಬೇಕು. ಏಕೆಂದರೆ ಸಮಾಜದಲ್ಲಿನ ಎಲ್ಲಾ ಜನರು ಏಕದೇವೋಪಸಕರಾಗಿರುವುದಿಲ್ಲ. ಒಬ್ಬರು ಶಿವನನ್ನು ಇಷ್ಟದೇವರಾಗಿಸಿಕೊಂಡಿದ್ದರೆ ಮತ್ತೊಬ್ಬನು ವೀರಭದ್ರನನ್ನು, ವಿಠಲನನ್ನು ಪೂಜಿಸುತ್ತಿರಬಹುದು. ಇದಕ್ಕಾಗಿಯೇ ಅವರೆಲ್ಲರಿಗೂ ತಮ್ಮ ತತ್ವಪದಗಳು ತಿಳಿಯಲಿ ಎಂದು ಅವರವರ ಇಷ್ಟ ದೇವರ ಮುಖಾಂತರವೇ ಹೇಳಬೇಕೆಂದಿರುವ ವಿಷಯವನ್ನು ಹೇಳಿದ್ದಾರೆ. ಶರಣ ಬಸವನಾಗಿ ಭಕ್ತರಾದವರು ಈ ಲೋಕದಲ್ಲಿನ ಕುಲಕುಲಗಳೆಂದು ಕಿತ್ತಾಡುವವರನ್ನು ನೀನು ಉದ್ಧಾರ ಮಾಡಿದೆ. ಭಕ್ತರ ಮೇಲೆ ಮಾಡಿದ ಪವಾಡಗಳು ಇಂದಿಗೂ ಜನರ ಮೇಲೆ ಪ್ರಭಾವ ಬೀರಿವೆ.

ಕುಲಮದ, ಧನಮದ, ವಿದ್ಯಾಮದ, ರೂಪಮದ, ಅರ್ಥಮದ, ಯೌವನದ ಮದ, ಅನ್ನದ ಮದ, ಬಲವಮದ ಈ ಎಂಟು ಮದಗಳನ್ನು ಅಜ್ಞಾನದ ತೆರೆಯ ಹೊಡೆತದಿಂದ ರಕ್ಷಿಸಿಕೊಳ್ಳಲು ಮತ್ತು ಸಾಮರಸ್ಯದ ಕಡೆಗೆ ನಡೆಸಲು ಅಷ್ಟಾವರಣಕ್ಕೆ ನಿಷ್ಠನಾಗಿರಬೇಕು. ಹೀಗಿದ್ದರೆ ಈ ಭೂಮಿಯೊಳಗೆ ಸುಧರ್ಮ ನೆಲೆಸುತ್ತದೆಂದು ಕಲಬುರ್ಗಿಯಲ್ಲಿ ನೆಲೆಸಿದ ಶರಣಬಸವನನ್ನು ಕರಿಘೂಳೇಶ್ವರರಿಗೆ ಹೋಲಿಸಿ ಹೇಳಿದ್ದಾರೆ.

ಮುರುಘೇಂದ್ರಸ್ವಾಮಿಗಳು ಹಿಂದೂ-ಮುಸ್ಲಿಂಮರ ಸೌಹಾರ್ದತೆಯನ್ನು ಮೆರೆದಿದ್ದಾನೆ, ಹಿಂದೂಗಳಿಗೆ ಜೀವನದಲ್ಲಿ ಮಾರ್ಗದರ್ಶಕರಾದಂತೆ ಮುಸ್ಲಿಂಮರಿಗೂ ನೀತಿ ಭೋದೆಯನ್ನು ಭೋದಿಸಿದ್ದಾರೆ. ಹೀಗೆ ಹಿಂದೂ-ಮುಸ್ಲಿಂಮರ ಸೌಹಾರ್ದತೆ ಮೆರೆದ ಇನ್ನೊಂದು ತತ್ವಪದಕಾರನೆಂದರೇ ಸಾವಳಗಿ ಶಿವಲಿಂಗೇಶ್ವರರು. ಇವರಿಬ್ಬರ ಜೀವನದಲ್ಲಿ ಮುಸ್ಲಿಂರ ಆಗುಹೋಗುಗಳು ನಡೆಯುತ್ತವೆ, ಕಲಬುರ್ಗಿ ಭಾಗದಲ್ಲಿ ಮುಸ್ಲಿಂ

ಅರಸರ ಆಡಳಿತದಲ್ಲಿ ದೆಹಲಿಯ ಮೂಲದವರಾದ ಗೇಸುದರಾಜ್ ಅವರು ಗುಲಬರ್ಗಕ್ಕೆ ಬರುತ್ತಾರೆ. ಗುಲಬರ್ಗಾದಲ್ಲಿ ತಮ್ಮ ಪ್ರಭಾವ ಬೀರಿ ಸಂತ 'ಬಂದೇನವಾಜ' ಎಂದೇ ಪ್ರಸಿದ್ಧರಾಗಿ ಜನಸಾಮಾನ್ಯರ ಜೀವನದಲ್ಲಿ ಪ್ರವೇಶಿಸುತ್ತಾರೆ. ಇವರ ಕಾಲದಲ್ಲಿ ಹಿಂದೂ ಧರ್ಮದ ಕೆಳಸ್ತರದ ಅನೇಕ ಪಂಗಡಗಳು ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡಿದ್ದು ಕಂಡು ಬರುತ್ತದೆ. ಹೀಗೆ ಮತಾಂತರಗೊಂಡಿದ್ದನ್ನು-

"ಚಂದ್ರಾರ್ಕ ಕೋಟಿತೇಜಾ
ಬಂದಾನವಾಜ ಖಾಜಾ
ಮಂದಾರ ಪುಷ್ಪ ಪುಜಾ
ರಾಜಾಧಿರಾಜ ಖಾಜಾ"[೧೫]

ಚಂದ್ರನು ಕೋಟಿ ಕೋಟಿ ಕಿರಣಗಳಿಂದ ಹೊಳೆಯುತ್ತಿದ್ದರು, ನಿನ್ನ ಬೆಳಕಿನಿಂದ ಮಂದಾರ ಪುಷ್ಪಗಳು ಅರಳುತ್ತಿವೆ. ಎಲ್ಲರನ್ನು ಗೆದ್ದ ನೀನು ಎಲ್ಲರಿಗಿಂತಲೂ ಶ್ರೇಷ್ಠನೆನಿಸಿಕೊಂಡರು. ನಿನ್ನಲ್ಲಿ ಯಾವುದೇ ಕೊರತೆ ಕಂಡು ಬರುತ್ತಿದೆ, ಅದಕ್ಕೆ

"ಆಧಾರ ಲಿಂಗಾಚಾರ
ಸ್ವಾದಿಷ್ಟದೊಳ್ವಿಚಾರ
ನಾದೋಂಕಾರ ಮುಚ್ಚಾದ
ವೇದಗೋಚಾರ ಖಾಜಾ"[೧೬]

ಲಿಂಗವಂತರ ಮನಸ್ಸನ್ನು ಅರಿಯದೇ ಅವರನ್ನು ನಿನ್ನೆಡೆಗೆ ಬರಮಾಡಿಕೊಂಡಿ, ಆಚಾರ-ಲಿಂಗ-ಓಂಕಾರ-ವೇದಗಳನ್ನು ಮೊದಲು ನೀನು ತಿಳಿದುಕೊಳ್ಳು ಆಗಲೇ ನೀನು ಪರಿಪೂರ್ಣ ಸಂತನಾಗುವೆ ಎಂದಿದ್ದಾರೆ.

## ೧.೫ ಗುರುವಿನ ಕುರಿತು

ವೀರಶೈವದ ಹಿನ್ನೆಲೆಯಲ್ಲಿ ಬಂದ ಮುರುಘೇಂದ್ರಸ್ವಾಮಿಗಳು ಗುರುಗಳಿಗೆ ತಮ್ಮ ಜೀವನದಲ್ಲಿ ಮಹತ್ವವನ್ನು ನೀಡಿದ್ದಾರೆ. ಲಿಂಗಾಯತ ಧರ್ಮದ ಅಷ್ಟಾವರಣದಲ್ಲಿ ಗುರುವಿಗೆ ಪ್ರಪ್ರಥಮ ಪ್ರಾಶಸ್ತ್ಯ. "In veerashaivism Guru has a unique place. He is mentioned as the first among the Astavaranas the eight armours (coverings) of faith that guard an aspirant on his path of spiritual piligrimage."[17]

'ಶಿವಪಥವನರಿವಡೆ ಗುರುಪಥವೇ ಮೊದಲು' ಎಂಬ ಬಸವಣ್ಣನ ವಾಣಿಯಂತೆ ಮುರುಘೇಂದ್ರ ಸ್ವಾಮಿಗಳು ಅನೇಕ ತತ್ವಪದಗಳಲ್ಲಿ ಗುರುವಿನ ಸದ್ಗುಣ ಸಂಪತ್ತನ್ನು ವರ್ಣಿಸಿದ್ದಾರೆ. ಅದ್ಭುತ ಶಕ್ತಿಯುಳ್ಳ ಗುರುವಿನ ಬಗೆಗೆ ಎಲ್ಲ ತತ್ವಪದಕಾರರು ಹೇಳುತ್ತಲೇ ಬಂದಿದ್ದಾರೆ. ಇದರಿಂದ ಮುರುಘೇಂದ್ರಸ್ವಾಮಿಗಳು ಹೊರತಾಗಿಲ್ಲ.

ಗುರುವು ಲೋಭಸ ಮೋಹವಿರಹಿತ, ಆತ್ಮತತ್ವವಬಲ್ಲಾತ, ವಿಷಯಭ್ರಾಂತಿವಿಮುಕ್ತ, ಕುಲಕ್ರಮದಿಂದ ಬಂದ ಆಚಾರಕ್ಕಾಗರ, ಕುಮಾರ್ಗಾಚಾರವಿದೂರ, ಶಿವಧ್ಯಾನಷರ, ಶಿವತತ್ವ ಭಾಸ್ಕರ, ಶಾಂತಗುಣಸಾಗರ, ಸಕಲಶಿಷ್ಯ ಮಂದಾರ, ಸುಜ್ಞಾನಿ, ಸುಯ್ಞಾನಿ, ಶರಣ ಸುಪ್ರಾಸಿ, ಸಕಲ ಶಿಖಾಮಣಿ ಭಕ್ತನಾಗಲಿ ವಿರಕ್ತನಾಗಲಿ, ಬಡವನಾಗಲಿ, ಬಲ್ಲಿದವನಾಗಲಿ ಶ್ರೀಗುರು ಕೃಪೆಯಿಲ್ಲದೆ ಶಿವಸಾಕ್ಷಾತ್ಕಾರ ಸಾಧ್ಯವಾಗದು. 'ಮನೋಂಬುಜ ಮಧುಕರ'ನಾದ ಪರಮಾತ್ಮನು 'ಗುರುಮುಖದಲ್ಲಿಲ್ಲದೆ ನಿಗಮಾಗಮ ಮುಖದಲ್ಲಿಲ್ಲ'ವೆನ್ನುತ್ತಾರೆ.[೧೮]

ನಮಗೆ ಕೇಳಿ ಬರುವ 'ಆಚಾರ್ಯ', 'ದೇಶಿಕ', 'ಜಗದ್ಗುರು', 'ವಿಶ್ವಗುರು', 'ಚಿದ್ಗುರು', 'ಜ್ಞಾನಗುರು' ಎಂದು ಗುರುಗಳನ್ನು ವಿಂಗಡನೆ ಈ ರೀತಿ ಮಾಡಬಹುದು. ನಿತ್ಯ ನೈಮಿತ್ತಿಕಾಚಾರನಿರತರನ್ನಾಗಿ ಮಾಡಿ ತಾನೂ ಆಚರಿಸಿದರೆ ಆತನಿಗೆ 'ಆಚಾರ್ಯ', ಆರು ಅಧ್ವಗಳನ್ನು ಮೀರಿ ಶಿವಯೋಗ ಸಂಪನ್ನನಾಗಿ ಬೋಧಿಸಿದರೆ 'ದೇಶಿಕ', ಮಾಯಾ ಸಮುದ್ರವನ್ನು ದಾಟುವ ಉಪಾಯವನ್ನು ತೋರಿದರೆ 'ಜಗದ್ಗುರು'. ತನ್ನ ಯೋಗ ಪ್ರಭಾವದಿಂದ ಕಣ್ಣಿಗೆ ಕಾಣುವ ಸಕಲವಸ್ತುಗಳಲ್ಲಿ ಅಕಂಡ ಚೈತನ್ಯವನ್ನು ಅಳವಡಿಸುವಾತನೇ ವಿಶ್ವವಾಸಕ 'ವಿಶ್ವಗುರು'.[೧೯]

ಸಾಧಕರಾದ ಶಿಷ್ಯರ ಅಧಿಕಾರ ಭೇದದಿಂದ ಗುರುವೇ ಎಂಟು ಪ್ರಕಾರವಾಗುವನು. ಶಾಸ್ತ್ರದ ಶಬ್ದಾರ್ಥಗಳನ್ನು ಬೋಧಿಸುವಾತನು ಭೋದಕ ಗುರು, ತತ್ವದರ್ಶಕನೇ ವೇದಗುರು, ವಿಶ್ವ ಆಕರ್ಷಣಾದಿಗಳಿಂದ ಇಹಲೋಕದಲ್ಲಿ ಸುಖವನ್ನು ಪರಲೋಕದಲ್ಲಿ ದುಃಖವನ್ನು ಪಡೆಯುವಂತೆ ಮಾಡುವಾತನೇ ನಿಷಿದ್ಧ ಗುರು, ಪುಣ್ಯ ಕರ್ಮೋಪದೇಶದಿಂದ ಇಹಪರವೆರಡರಲ್ಲಿಯೂ ಸುಖವನ್ನು ಪಡೆಯುವಂತೆ ಮಾಡುವಾತನೆ ಕಾಮ್ಯ ಗುರು, ವಿವೇಕದಿಂದ ಶಮದಮಾದಿ ಷಡ್ಗುಣಪ್ರದನೇ ಸೂಚಕ ಗುರು, ವಿಷಯಗಳನ್ನು ಮಿಥ್ಯೆಯೆಂದು ತೋರಿ ಆತ್ಮನಲ್ಲಿ ಪ್ರೀತಿ ಹುಟ್ಟಿಸುವಾತನೇ ವಾಚಕ ಗುರು, ಶಿವಜೀವರ ಐಕ್ಯದ ಜ್ಞಾನವನ್ನು ಪ್ರಧಾನ ಮಾಡುವಾತನೇ ಕಾರಕ ಗುರು, ಸಂಶಯ ನಿರಸನ ಮಾಡುವುದರ ಮೂಲಕ ನಿತ್ಯಮುಕ್ತಿಯನ್ನು ಕೊಡುವಾತನೇ ವಿಹಿತಗುರು.[೧] ಶಿಷ್ಯನಿಗೆ ಶಿವತತ್ವ ಬೋಧಿಸಿದ ದೀಕ್ಷಾಗುರುವೆ ಶಿಕ್ಷಾಗುರುವೆನಿಸುವನು. ಸಂದೇಹ ಸಂದೋಹವೆಂಬ ದಟ್ಟಡವಿಯು ವಿಶ್ವಗುರುವಿನ ವಿಮಲವಚನಧಾರೆಯಿಂದ ದೂರಾಗುವದು. ಶಿಷ್ಯರ ಹೃದಯ ಭಿತ್ತಿಯ ಮೇಲೆ ಚಿನ್ಮಯನ ಚಿತ್ರವನ್ನು ಚಿದ್ರುಪದೀಪದಿಂದ ತೊಳಗಿಸಿ ತೋರುವವನೇ ಚಿದ್ಗುರು.

'ಶಿವಾಂಶಿಕನಾದ ಜೀವನಿಗೆ ದೊರೆತ ದೇಹದಲ್ಲಿ ಲಿಂಗ ಕಳೆಗಳಿರುವ ಅರಿವನ್ನು ಮೂಡಿಸುವವನು ಗುರು' ಅಂತಹ ಗುರುವಿನ ಬಗೆಗೆ ತತ್ವಪದಕಾರರು ವಿವರಣೆ ನೀಡುತ್ತಾ ಗುರು ಎಂದರೆ ಅದು ಬೇರೆ ಏನೂ ಅಲ್ಲ. ತನ್ನರಿವೇ ತನಗೆ ಗುರು ಎನ್ನುತ್ತಾರೆ. ಇನ್ನೊಬ್ಬರು ಗುರುವಾದರೂ ಅದು ದೀಕ್ಷಾ, ಶಿಕ್ಷಾ ಮತ್ತು ಮೋಕ್ಷಗಳಿಗೆ ಮಾತ್ರ. ಇವುಗಳಿಗಾಗಿ ಗುರು ಬೇಕಾಗಿದ್ದರೂ, ವ್ಯಕ್ತಿಯ ವಿಕಾಸಕ್ಕೆ ಆತನ ಮನಃಸ್ಥಿತಿ ಅಥವಾ ಅರಿವೇ ಮೂಲವಾಗಿದ್ದ, ಮತ್ತೊಬ್ಬರ ದೀಕ್ಷೆ ಅನುಷಂಗಿಕವಾಗಿರುತ್ತದೆ. ಆದರೂ ಪರಸ್ಪರ ಪೂರಕವಾದ ಇಬ್ಬರೂ ಅನಿವಾರ್ಯವಾಗಿ ಬೇಕೆ ಬೇಕಾಗುತ್ತಾರೆ.

ಈ ಎಲ್ಲ ಮೇಲಿನ ಅಂಶಗಳಂತೆ ಪ್ರತಿಯೊಬ್ಬರಿಗೂ ಗುರು ಅವಶ್ಯಕವಾಗಿ ಬೇಕಾಗಿರುವಂತೆ ಮುರುಘೇಂದ್ರಸ್ವಾಮಿಗಳು ಇದಕ್ಕೆ ಹೊರತಾಗಿಲ್ಲ, ಅಂತೆಯೇ ಅವರು ತತ್ವಪದಗಳಲ್ಲಿ ಗುರುವನ್ನು ಕಂಡಿರುವ ರೀತಿ, ಆತನ ಮಹಿಮೆಯನ್ನು ಸಾರಿರುವ ಬಗೆ ವಿಶಿಷ್ಟವಾದುದು.

ತಮ್ಮ ಅಣ್ಣನನ್ನು ಗುರುವಾಗಿ ಸ್ವೀಕರಿಸಿದ ಮುರುಘೇಂದ್ರಸ್ವಾಮಿಗಳು ಕರಿಘೂಳೇಶ್ವರ ಹೆಸರನ್ನು ತಮ್ಮ ಅಂಕಿತವಾಗಿ ಮಾಡಿಕೊಂಡು ತಮ್ಮ ತತ್ವಪದದಲ್ಲಿ ಗುರುವನ್ನು ಕುರಿತು ಹೀಗೆ ಹೇಳಿದ್ದಾರೆ.

"ಶ್ರೀ ಗುರುಕರಿಬಸವ ಪೊರೆವಂತಧೀರ

ಮರೆಯಲಾರೆನು ಮುಕ್ತಿ ಕೊಡುವುದು ವರಾ

ಶರಧಿಸಂಸಾರ ಪಾರವಾರ

ಶೇರಿ ತಿರಗಿದೆ ಭವನಸಾಸಿರ

ಪೂರ್ವ ಜನ್ಮದ ಗುರ್ತನರುಹಿ

ಪರಮ ಭೋದವ ಬೋಧಿಸಿದ ವರ"[೨೦]

ಪಾರಮಾರ್ಥಿಕ ಪಥದಲ್ಲಿ ಮಾರ್ಗ ತೋರಿಸಲು ಅನುಭವಿಗಳಿಗೆ ಗುರು ಅತ್ಯಗತ್ಯವೆಂಬುದನ್ನು ಮನಗಂಡ ಮುರುಘೇಂದ್ರಸ್ವಾಮಿಗಳು ಯಾವ ಮಹಾತ್ಮನು ಗಾಳಿ ಬೆಳಕುಗಳಂತೆ ಯಾವುದಕ್ಕೂ ಅಂಟಿಕೊಳ್ಳದೆ ಎಲ್ಲವನ್ನೂ ಒಳಗೆ ಮಾಡಿಕೊಂಡು ಶಿವಜ್ಞಾನವೇ ಶರೀರವಾಗಿ ಅಂದೇ ಅರಳಿ ಮೈದಾಳಿದಂತೆ, ನಿರ್ಮಲಾತ್ಮಕನಾಗಿ ಸಕಲ ಕುಲಕೋಟಿಯ ಕಲ್ಯಾಣಕ್ಕಾಗಿ ಹೋಗುತ್ತಾನೆಯೋ ಅವನೇ ನಿಜವಾದ ಗುರು. ನಮ್ಮ ಕರಿಘೂಳೇಶ್ವರ ಗುರುಗಳು ಪೊರೆವಂತರ ಧೀರನಾಗಿದ್ದು ನಮ್ಮಂತ ನರಜೀವಿಗಳಿಗೆ ಜೀವನದ ಸನ್ಮಾರ್ಗ ತಿಳಿಸಿ ಅದರಂತೆ ನಡೆಯಲು ಮಾರ್ಗದರ್ಶಕರಾಗಿದ್ದಾರೆ. ಘನಘೋರ ಸಮುದ್ರದಂತಿರುವ ಈ ಸಂಸಾರ, ಪರಿವಾರವನ್ನು ನಡೆಸದೆ ಜೀವನದಲ್ಲಿ ಸೋತು ಒಂದು ಕಡೆ ನೆಲೆ ನಿಲ್ಲದೆ, ತಿರುತಿರುಗಿ ಬಂದವರಿಗೆ ಪೂರ್ವ ಜನ್ಮದ ಗುರುತನ್ನು ತಿಳಿಸಿ ನರಜನ್ಮದಲ್ಲಿ ಜನಿಸಿದ ನಮ್ಮನ್ನು ಮೋಕ್ಷದೆಡೆಗೆ ಹೋಗಲು ವರ ಕರುಣಿಸಿದ್ದಾರೆ.

ಹೀಗೆ ಗುರುವಿನ ಬಗ್ಗೆ ಹೇಳುತ್ತಾ ತಮ್ಮ ಬಾಲ್ಯದಿಂದ ಇಲ್ಲಿಗೆ ಹೇಗೆ ಗುರುಗಳು ತಿದ್ದಿ, ತೀಡಿ ಬೆಳೆಸಿದರೆಂಬುದನ್ನು ಇಲ್ಲಿ ಹೇಳಿದ್ದಾರೆ.

"ಆಟಪಾಟಗಳೆಲ್ಲವನು ಬಿಡಿಸಿದ

ಸವೆಮಾಡಿಸಿದ

ಪಟುತರದ ಹಟಯೋಗ ಬಿಡಿಸಿದ

ದಿಟವಾದ ಪಂಚಾಕ್ಷರಿ ಮಂತ್ರವನ್ನು ಪಠಿಸಿದ

ಷಟ್‌ಚಕ್ರಗಳನು ಮುಟ್ಟಿ ಶಿವನ ಆಟ ತೋರಿಸಿದ

ನಾಟಕ್ಕಂಪನೊಳು ಸೇರಿಸಿ

ತ್ರಿಕೂಟಸಂಗಮದಿ ನೆಲಸಿ

ಥೇಟ ಜ್ಞಾನಮಂಟಪದೊಳು

ಕೋಟಿ ಸ್ಪಟಿಕಚಾಟಿ ಹಿಡಿಸಿದ"[೨೧]

ಪ್ರತಿಯೊಬ್ಬರು ತಮ್ಮ ಜೀವನದ ಬಾಲ್ಯದಲ್ಲಿ ಎಲ್ಲರಂತೆ ಆಟಗಳನ್ನು ಆಡುತ್ತಾ ಬೆಳೆಯುತ್ತಾರೆ. ಆದರೆ ನಮ್ಮ ಮುರುಘೇಂದ್ರಸ್ವಾಮಿಗಳ ಬಾಲ್ಯ ಸಾಮಾನ್ಯರಂತೆ ಕಳೆಯಲೇ ಇಲ್ಲ. ಆಟ ಆಡುವುದರಲ್ಲಿ ಕಾಲ ಕಳೆಯುತ್ತಿದ್ದ ನನ್ನನ್ನು ಆಟ ಆಡಲು ನಿಷೇಧಿಸಿದ. ನಾನು ಅವರ ಮೇಲೆ ಸಿಟ್ಟಾದರೆ ಪರಿಪರಿಯಾಗಿ ಸಮಾಧಾನಪಡಿಸುತ್ತಾ ನನ್ನ ಹಠವನ್ನು ಶಮನಮಾಡಿ ಅವರ ಇಚ್ಛೆಯಂತೆ ಬೆಳೆಸಲು ಪ್ರಯತ್ನಿಸಿದರು. ಚಿಕ್ಕ ವಯಸ್ಸಿನಲ್ಲಿಯೇ ನನಗೆ ದೀಕ್ಷೆ ಕೊಡಲು ಪ್ರಾರಂಭಿಸಿದರು. ಸೃಷ್ಟಿಯನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡ 'ಓಂ ನಮಃ ಶಿವಾಯ' ಎಂಬ ಪಂಚಾಕ್ಷರಿ ಮಂತ್ರವನ್ನು ನನಗೆ ಬೋಧಿಸಿದರು. ಸ್ವತಃ ಕರಿಘೂಳೇಶ್ವರರೆ ಶಿವನಂತೆ ರೂಪತಾಳಿ ಷಟ್‌ಚಕ್ರಗಳನ್ನು ಮುಟ್ಟಿ ದೈವತ್ವವನ್ನು ತೋರ್ಪಡಿಸಿದ್ದರು. ಬಾಲ್ಯವಸ್ಥೆ ಕಳೆದ ಮೇಲೆ ಜೀವನ ನಿರ್ವಹಣೆಗಾಗಿ ಶರಣರ ಕಾಯಕ ಮಹತ್ವದಂತೆ ನನ್ನನ್ನು ನಾಟಕ ಕಂಪನಿಯೊಂದರಲ್ಲಿ ಸೇರಿಸಿದರು. ಅವರ ಇಚ್ಛೆಯಂತೆ ತ್ರಿಕೂಟ ಸಂಗಮದಿ ನೆಲೆಸಿ ಜ್ಞಾನಮಂಟಪದ ಒಳಗೆ ಪ್ರವೇಶಿಸಿದ ಕರಿಘೂಳೇಶ್ವರರು ನನಗೆ ಜಂಗಮತ್ವವನ್ನು ಬೋಧಿಸಿದರು. ಜನನ ಮರಣಗಳನ್ನು ಶೂನ್ಯ ಮಾಡಿಕೊಂಡವನೇ ಜಂಗಮ ಎಂಬ ಅರಿವು ಮೂಡಿತೆಂದು ಕರಿಘೂಳೇಶ್ವರ ಈ ಹಾಡಿನ ಮೂಲಕ ತೋಡಿಕೊಂಡಿದ್ದಾರೆ.

ಎಲ್ಲ ಅನುಭಾವಿ ಕವಿಗಳು ದೇವರ ಮತ್ತು ಅವರ ಹಾಗೂ ಗುರುವಿನ ಮತ್ತು ಅವರ ಸಂಬಂಧಗಳನ್ನು ಗಂಡ-ಹೆಂಡಿರ, ಪ್ರೇಯಸಿಯ ರೂಪದಲ್ಲಿ ಕಂಡುಕೊಂಡಿದ್ದಾರೆ. ಎಲ್ಲ ತತ್ವಪದಕಾರರಂತೆ ಮುರುಘೇಂದ್ರಸ್ವಾಮಿಗಳು ತಮ್ಮ ಗುರುಗಳನ್ನು ಪ್ರಿಯ ಎಂದು ಸಂಭೋದಿಸಿದ್ದಾರೆ. ಗುರುವನ್ನು ಪ್ರಿಯೆಯೆಂದು, ತಮ್ಮನ್ನು ಪ್ರಿಯತಮೆ ಎಂದು ಕರೆದಂತಿದೆ ಈ ಕೆಳಗಿನ ಹಾಡಿನಲ್ಲಿ.

"ಎಂಥ ವಳೆವ ಪ್ರಿಯೆ ದೊರೆತಾನೆ

ಯನ್ನಂತರಂಗದ

ಅಂತು ತಿಳುಹಿವ ಅಂತಕಾಂತಕನೆ

ಯಂಥ ವಳ್ಳವ ಪ್ರಿಯ ದೊರೆತ ಕಾಂತೆ ಕೇಳೆ ಮೂರು ಜಗದಿ

ಭ್ರಾಂತಿ ಹಿಡಿಸುವ ಅಣ್ಣತಮ್ಮರ

ಭ್ರಾಂತಿ ಬಿಡಿಸಿದ ಶಾಂತತಾನೆ"[೨೨]

ಸಾಮಾನ್ಯವಾಗಿ ಪ್ರೀತಿ-ಪ್ರೇಮಗಳಲ್ಲಿ ತೊಡಗಿದ ಗಂಡು-ಹೆಣ್ಣುಗಳು ಪರಸ್ಪರ ನಂಬಿಕೆಯ ಮೇಲೆಯೆ

ಕನಸನ್ನು ಕಟ್ಟುತ್ತಾರೆ. ಪರಸ್ಪರರು ಮಾತನಾಡದೆ ಇದ್ದರು ಒಬ್ಬರನ್ನು ಒಬ್ಬರು ಅರ್ಥಮಾಡಿಕೊಂಡಿರುತ್ತಾರೆ. ಅವರಂತೆ ಮುರುಘೇಂದ್ರ ಸ್ವಾಮಿಗಳು ತಮ್ಮ ಗುರುವನ್ನು ಪ್ರಿಯ ಸ್ಥಾನದಲ್ಲಿ ನಿಲ್ಲಿಸುತ್ತಾರೆ. ನನ್ನ ಪ್ರಿಯತಮ ನನ್ನ ಅಂತರಂಗವನ್ನು ಅರಿತಿರುವವನು ನಾನು ಯಾವುದೇ ಮುಚ್ಚು ಮರೆಯಿಲ್ಲದೆ ನನ್ನ ಜೀವನದ ಪ್ರತಿಯೊಂದನ್ನು ಆತನಿಗೆ ಪ್ರಾಮಾಣಿಕವಾಗಿ ಅರ್ಪಿಸಿರುವೆ, ಪ್ರಿಯನಿದ್ದರೆ ಹೀಗಿರಬೇಕು ಮೂರು ಜಗದಿ ಅವನ ಗುಣಗಾನ ನಡೆಯುತ್ತಿರಬೇಕು. ನರಜನ್ಮದಲ್ಲಿ ಇರುವ ನಮ್ಮಲ್ಲಿ ಭ್ರಾಂತಿಯೆಂಬುದು ತುಂಬಿಕೊಂಡಿರುತ್ತದೆ. ಆ ಭ್ರಾಂತಿಯನ್ನು ಶಾಂತರೀತಿಯಲ್ಲಿ ನನ್ನ ಪ್ರಿಯತಮ ನನ್ನಿಂದ ಹೊರಹಾಕಿದ್ದಾನೆ.

ಶ್ರೇಷ್ಠ ಶರಣರು ಉತ್ಸಾಹಜೀವಿಗಳು. ತಮ್ಮ ದೈನಂದಿನ ಕಾಯಕಗಳು ಆಯಿತೆಂದರೆ ರಥೋತ್ಸವ-ಜಾತ್ರೆ ಎಲ್ಲಿ ನಡೆಯುತ್ತದೋ ಅಲ್ಲಿಗೆ ಆತ್ಮೀಯರೊಡನೆ ಹೊರಡುತ್ತಿದ್ದರು. ಜಾತ್ರೆ ಉತ್ಸವಗಳಿಗೆ ಹೋಗಲು ಆಗ ಒಳ್ಳೆ ಶ್ರೇಷ್ಠ ಹೋರಿಗಳನ್ನು ಕಟ್ಟಿದ ಗಾಡಿ ಕಟ್ಟಿಸುತ್ತಿದ್ದರು. ಸಂಭ್ರಮದಿಂದ ಹೊರಡುತ್ತಿದ್ದರು. ಆದರೆ ಮುರುಘೇಂದ್ರರ ಕಾಲದಲ್ಲಿ ಹಳ್ಳಿಗಳಲ್ಲಿಯೂ ಅಲ್ಪಸ್ವಲ್ಪ ಬದಲಾವಣೆಗಳಾಗಿ ಅಲ್ಲಿ ಎತ್ತಿನ ಗಾಡಿಯ ಬದಲಾಗಿ ವಾಹನ(ಯಂತ್ರದ)ಗಳು ಕಂಡುಬರುತ್ತಿದ್ದವು. ಅಂತಲೇ ಭಕ್ತರು

"ಗುರುರಾಯರು ಬರುತ್ತಾರೇನೆ ಭರರರ ಮೋಟರದಾಗ
ಕರುಣದಿಂದ ಕರಪಿಡಿಯಲು ||ಶ್ರೀ ಗುರು||
ಬಡ ದೃಢಭಕ್ತರ ನೋಡಿ
ಸಡಗರದಲಿ ಕೊಂಡಾಡಿ
ಬೇಡಿದ ವರ ದಯಮಾಡುವ ||ಶ್ರೀ ಗುರು||"[೨೩]

ಆಗಿನ ಸಂದರ್ಭದಲ್ಲಿ ಹಳ್ಳಿಗಳಲ್ಲಿ ವಾಹನಗಳು ಬಂದರೆ ಚಿಕ್ಕವರಿಂದ ಹಿಡಿದು ದೊಡ್ಡವರವರೆಗೂ ಅದನ್ನು ಆಶ್ಚರ್ಯದಿಂದ ನೋಡುವವರೇ. ಇಲ್ಲಿ ಮುರುಘೇಂದ್ರಸ್ವಾಮಿಗಳು ಈ ಮೋಟಾರವನ್ನು ಗಮನದಲ್ಲಿ ಇಟ್ಟುಕೊಂಡು ಜನರಿಗೆ ಬೋಧನೆಯನ್ನು ಮಾಡಿದ್ದಾರೆ. ಅವರಿಗೆ ಗೊತ್ತಿತ್ತು ಈ ವಾಹನವನ್ನು ಉದಾಹರಣೆಯಾಗಿ ಬಳಸಿಕೊಂಡರೆ ನಾನು ಹೇಳಬೇಕೆಂದಿರುವದು ಬೇಗನೆ ಜನಗಳ ಮನ ಮುಟ್ಟುತ್ತದೆಂದು ಇಲ್ಲಿ ಮೋಟರ ವಾಹನವೆಂಬ ಪದವನ್ನು ಬಳಸಿದ್ದಾರೆ.

"ಬಲ್ಲವರಿಗೆ ಬಲು ಪ್ರೇಮ
ನಿಲ್ಲದೇ ಸಲಹುವ ನೇಮ
ಯಲ್ಲಿ ನೋಡಲಲ್ಲಿರುವನು"[೨೪]

ಮುರುಘೇಂದ್ರರು ಗುರುವಿನ ಬಗ್ಗೆ ಹೇಳಿದಂತಿದೆ ಗುರುವಿನ ಪಾದ ಹಿಡಿದು ನಮ್ಮ ಸರ್ವಸ್ವವನ್ನು ಅವನಿಗೆ ಅರ್ಪಿಸಿದರೆ ಖಂಡಿತವಾಗಿಯೂ ನಮ್ಮನ್ನು ಸಲಹುವನು. ಗುರು-ಶಿಷ್ಯರ ನಡುವೇ ಯಾವುದೇ ನೇಮಗಳಿಲ್ಲ. ಅವನು ಹಾಕಿಕೊಟ್ಟ ಮಾರ್ಗದಲ್ಲಿ ನಡೆದರೆ ಮೋಕ್ಷದೆಡೆಗೆ ಹೋಗುತ್ತೇವೆ.

ಹಲವಾರು ಮಹಾಪುರುಷರು ಗುರುವನ್ನು ಮತ್ತು ದೇವರನ್ನು ಸತಿಪತಿ ಭಾವದಿಂದ ಕೊಂಡಾಡಿದ್ದಾರೆ. ಇಲ್ಲಿ ಕವಿ 'ಗುರು ಎಂದರೆ ಜ್ಞಾನ' ಎಂದು ಅರ್ಥವನ್ನು ನೀಡಿದ್ದಾನೆ. ಅವರ ದೃಷ್ಟಿಯಲ್ಲಿ ಮನುಷ್ಯನು ಹುಟ್ಟುವ ಮೊದಲುಗೊಂಡು ಲೌಕಿಕ ಸುಖಕ್ಕಾಗಿ ಅಧಿಕಾರ, ನೌಕರಿ, ಸಂಪಾದನೆ ಇತ್ಯಾದಿಗಳನ್ನು ಹುಡುಕಿಕೊಂಡು ಹೋಗುವಂತ ಸತ್ಯದ ಬೆಳಕನ್ನು ಹುಡುಕುವ ವಿಜ್ಞಾನಿಯಾಗಬೇಕು. ಅದು ಸಂತೆಯೊಳಗಿಟ್ಟು ಮಾರುವ ವಸ್ತುವಲ್ಲ. ಅದನ್ನು ತಿಳಿಯಬೇಕಾದರೆ ನಿರಾಡಂಬರದಿಂದಿರುವ ನಿಷ್ಕಳಂಕ ನಿಜ ಶರಣರ ಬಳಿಗೆ ಹೋಗಿ ಅವರಲ್ಲಿ ತತ್ವಸಾರಾರ್ಥವನ್ನು ತಿಳಿದರೆ ಆಗ ಸತ್ಯದ ಸವಿ ತಿರುಳು ಸಿಗುತ್ತದೆ. ಸಾಧು ಸಂತರ ಸಾರಾಮೃತವನ್ನು ಪಾನ ಮಾಡಿದರೆ ಮನದ ದೌರ್ಬಲ್ಯಗಳೆಲ್ಲವೂ ಕಳಚಿ ದೃಢಭಕ್ತಿ ಎಂಬ ಗಟ್ಟಿಕಾಳು ನಿಲ್ಲುತ್ತದೆ.

## ೧.೬ ವೀರಶೈವ ತತ್ವಪರಿಪಾಲನೆ

ಪರಮೇಶ್ವರನಿಂದ ನಿರ್ಮಿತವಾದ ಜಗತ್ತಿನಲ್ಲಿ ಚರಮಶರೀರ ಎನಿಸಿಕೊಂಡು ಶೈವದ ಎಲ್ಲ ಬಗೆಯವರಲ್ಲೂ ವಿಶಿಷ್ಟವಾಗಿ ಇತರ ಶೈವರಂತೆ ಕ್ರಿಯಾಬಾಹುಳದಿಂದ ಅಲ್ಪ ಫಲವನ್ನು ಪಡೆಯದೆ, ಅಲ್ಪ ಕ್ರಿಯೆಯಿಂದ ಅನಂತ ಫಲಗಳನ್ನು ಪಡೆದ ಮತ್ತು ಶಿವದೀಕ್ಷೆಯಾದ ಮೇಲೆ ಸ್ನಾನ-ಭೋಜನ-ನಿದ್ರಾ-ಜಾಗರಣ-ಮಲಮೂತ್ರ ವಿಸರ್ಜನಾದಿ ಸರ್ವಕಾಲಗಳಲ್ಲಿ ಅಶುಚಿಯೆಂಬ ಭಾವನೆಯಿಲ್ಲದ ಸದಾ ಲಿಂಗಾಂಗ ಸಂಬಂಧಿಯಾಗಿ, ಲಿಂಗ ಭೋಗೋಪಭೋಗಿಯಾಗಿ ತನ್ನ ಇಷ್ಟಲಿಂಗದಲ್ಲಿ ಆಹ್ವಾನ- ವಿಸರ್ಜನ ಕ್ರಿಯೆಗಳನ್ನು ಮಾಡದೆ, ಲಿಂಗಲೋಪ-ವ್ರತಲೋಪವಾದಾಗಿ ಪ್ರಾಣತ್ಯಾಗವಲ್ಲದೆ ಬೇರೆ ಪ್ರಾಯಶ್ಚಿತ್ತವಿಲ್ಲದವನಾಗಿ, ಗುರುನಿಂದೆ-ಶಿವನಿಂದೆ-ಜಂಗಮನಿಂದೆ-ಪಾದೋದಕ ಪ್ರಸಾದ ಭಸ್ಮನಿಂದೆ-ಶಿವಾಗಮೆ-ಶಿವಕ್ಷೇತ್ರ-ಶಿವಾಚಾರ ನಿಂದೆಗೆ ಸಹಿಸದವನಾಗಿ ಇರುವನು ವೀರಶೈವನು.

"ವೀರಶೈವನಾಗೋ| ಮನವೇ| ಪಾರುವಾರಧಿ ನೀಗೋ|

ಭಾರಿ ಲಿಂಗವನು ಧರಿಸಿರು ಪರತರ

ಸಾರಾಮೃತ ಸವಿಜ್ಞಾನ ವೈರಾಗ್ಯದ"[೨೫]

ಮುರುಘೇಂದ್ರ ಸ್ವಾಮಿಗಳು ವೀರಶೈವರನ್ನು ಕುರಿತು ಮೊದಲು ನೀನು ವೀರಶೈವನಾಗು ಎಂದು ಮನಸ್ಸಿಗೆ ವಿನಂತಿಸಿಕೊಂಡಿದ್ದಾರೆ. ಲಿಂಗವಂತರಲ್ಲಿ (ವೀರಶೈವರಲ್ಲಿ) ಕ್ರಿಯಾಭೇದದಿಂದ

೧. ಸಾಮಾನ್ಯ ವೀರಶೈವರು

೨. ವಿಶೇಷ ವೀರಶೈವರು

೩. ನಿರಾಭಾರಿ ವೀರಶೈವರು

ಮುರುಘೇಂದ್ರರು ವೀರಶೈವರಾಗುವುದು ಹೇಗೆ ಎಂಬುದನ್ನು ಮೇಲಿನಂತೆ ಹೇಳಿದ್ದಾರೆ. ಈ ಮೂವರಲ್ಲಿನ ಗುಣಗಳನ್ನು ಅಳವಡಿಸಿಕೊಂಡರೆ ಈ ಭವಜೀವನವನ್ನು ದಾಟುತ್ತೇವೆ. ಕೇವಲ ಮೇಲ್ನೋಟಕ್ಕೆ ದೇಹದ ಮೇಲೆ ಭಾರೀ ಲಿಂಗವನ್ನು ಧರಿಸಿದರೆ ಮೋಕ್ಷಕ್ಕೆ ಹೋಗಲು ಸಾಧ್ಯವಾಗುವುದಿಲ್ಲ.

ಮನಸ್ಸು ಕೇವಲ ವೀರಶೈವನಾಗಿ ದೊಡ್ಡ ದೊಡ್ಡ ಲಿಂಗಗಳನ್ನು ಅಂಗದ ಮೇಲೆ ಧರಿಸಿದರೆ ಸಾಲದು ಈ ಮೂರು ಬಗೆಗಳಲ್ಲಿ ಉತ್ತಮವಾದುದನ್ನು ತಮ್ಮಲ್ಲಿ ಅಳವಡಿಸಿಕೊಳ್ಳಬೇಕು ಎಂದಿದ್ದಾರೆ.

ಅ. **ಸಾಮಾನ್ಯ ವೀರಶೈವರು:** ಶ್ರೀ ಗುರುವಿನ ಹಸ್ತಮಸ್ತಕ ಸಂಯೋಗದಿಂದ, ವಿಭೂತಿ ಪಟ್ಟದಿಂದ, ಶಿವಮಂತ್ರೋಪದೇಶದಿಂದ ಲಿಂಗಾಂಗಸಂಗಿಯಾಗಿ-ಹಸ್ತ-ಮಸ್ತಕ-ಕಂಠ-ಕಕ್ಷ-ವಕ್ಷಸ್ಥಳಗಳಲ್ಲಿ ಎಲ್ಲಿಯಾದರೊಂದೆಡೆ ಶಿವಲಿಂಗವನ್ನು ಧರಿಸಿ (ದಿನಕ್ಕೆ)- ಒಂದು ಸಲವಾದರು, ಮೂರು ಸಲವಾದರೂ ಲಿಂಗ ಪೂಜೆ ಮಾಡುತ್ತ ಗುರುಲಿಂಗ-ಭಸ್ಮಿತಗಳಲ್ಲಿ ಭಕ್ತಿಯುಕ್ತನಾಗಿರುವಾತನೇ ಸಾಮಾನ್ಯ ವೀರಶೈವ.

ಬ. **ವಿಶೇಷ ವೀರಶೈವ:** ಇಲ್ಲಿ ಬರುವ ವೀರಶೈವರು ಗುರುವಿನ ಅನುಮತಿಯಂತೆ ಶಿವಪೂಜಾ ಪರಾಯಣರಾದ ಕೀರ್ತಿವಂತರಾದ ನಾಲ್ವರು ಋತ್ವಿಕ್ಕುಗಳನ್ನು ಸ್ನಾನ-ಧವಲಾಂಬರ-ಆಭರಣ-ಗಂಧ - ಪುಷ್ಪಾದಿಗಳಿಂದ ಅಲಂಕರಿಸಬೇಕು ದೇವರನ್ನು ಪೂಜಿಸಲು ಖನನ-ದಹನ-ಶೋಧನ-ಸಂಪ್ರೋಕ್ಷಣ-ಮರ್ದನ-ಲೇಪನವೆಂಬ ಷಟ್ ಕರ್ಮಗಳಿಂದಲೂ, ಸಾರಣೆ-ಕಾರಣೆ-ತಳಿರು-ತೋರಣ-ಕುಸುಮಸರವಿಸರ-ಪವಳಿಗೆಯಿಂದಲೂ ಧೂಪಧೂಮಾದಿಗಳಿಂದಲೂ ಪರಿಶೋಭಿಸುವ ಮತ್ತು ಮನೋಹರವಾದ ದೀಪಾ ಮಂಟಪವನ್ನು ನಿರ್ಮಿಸಿ ಪೂಜೆ ಮಾಡಬೇಕು. ಹೀಗೆ ಪೂಜೆ ಮಾಡುವವನೂ ವಿಶೇಷ ವೀರಶೈವನೆನಿಸುವನು.

ಕ. **ನಿರಾಭಾರಿ ವೀರಶೈವ:** ಗೃಹಾದಿ ಸರ್ವಸಂಸಾರ ಸೌಖ್ಯ ಪರಿಗ್ರಹಗಳನ್ನು ಬಿಟ್ಟು ವಿದ್ಯೆಯೇ ಸಲೆ, ಸಂತೋಷವೇ ಸುತನು, ವಿರಾಗವೇ ಬಂಧು, ಕ್ಷಮೆಯೇ ಪರಿಚಾರಕರು, ಶಾಂತಿಯೇ ಸಖನು, ಭಕ್ತಿಯೇ ಮಾತೆ, ಆಚಾರವೆ ತಂದೆ, ಸತ್ಯವೇ ಸುತೆ, ಶ್ರದ್ಧೆಯೇ ಸೊಸೆ, ಮೈತ್ರಿ ಮುಂತಾದ ಸದ್ಗುಣಗಳೇ ಪೌತ್ರರು, ಜ್ಞಾನವೇ ದೇಹ, ವಿಚಾರವೇ ಕ್ಷೇತ್ರ, ಅಹಿಂಸೆಯೇ ದಾಸಿ, ಅಸ್ತೇಯವೇ ದಾಸನು, ಧರ್ಮವೇ ವಾಹನ, ದಯೆಯೇ ಆಚಾರ್ಯನು, ಮುಕ್ತಿಯೇ ದೇಶ- ಎಂಬ ಪರಮಾರ್ಥ ಕುಟುಂಬವುಳ್ಳಾತನಾಗಿರುವನು ನಿರಾಭಾರಿ ವೀರಶೈವನು. ಅವನು ಕಂಥೆ-ದಂಡ ಕಮಂಡಲು-ಭಿಕ್ಷಾಪಾತ್ರೆ-ಭಸ್ಮ-ಘುಟಿಕೆ ಎಂಬ ಬಾಹ್ಯ ಪಂಚಮುದ್ರೆಗಳನ್ನು ಆಯಾ ಮಂತ್ರಪೂರ್ವಕವಾಗಿ ಧರಿಸಿ, ಅಂತರಂಗದಲ್ಲಿ ಸಮತೆಯೇ ಕಂಥೆ, ಜ್ಞಾನವೇ ದಂಡ, ದಯೆಯೆ ಕಮಂಡಲು, ವೈರಾಗ್ಯವೇ ಭಿಕ್ಷಾಪಾತ್ರೆ, ಕ್ಷಮೆಯೇ ಭಸ್ಮ ಘುಟಿಕಗಳುಳ್ಳಾತನಾಗಿ, ತುರುಬು-ಜಡೆ-ಬೋಳು-ಅಜಿನ-ವಲ್ಕಲ-ದಿಗಂಬರಾಧಿ ವಿಚಿತ್ರ ವಿಶೇಷಂಗಳನ್ನಾದರೂ ಸ್ವೀಕರಿಸಿ ನಿಯತವಾದ ಭಿಕ್ಷಾಹರವನ್ನುಕೊಂಡು, ಭಸ್ಮೋದ್ಧಳನ-ತ್ರಿಪುಂಡ್ರಧಾರಣ-ಶಿವಲಿಂಗಾರ್ಚನ-ಶಿವಮಂತ್ರ ಜಪ-ಶಿವಧ್ಯಾನ-ಸ್ಥಳಕುಳ ವಿಚಾರ-ಲಿಂಗಾಂಗ ಸಂಯೋಗಾದಿ ಜ್ಞಾನಕ್ರಿಯಾ ,ಸಂಪನ್ನನಾಗಿ, ರಸರಸಾಯನವಾದ-ವಿಶ್ವ-ಜ್ಯೋತಿಷ್ಯ-ಕ್ರಯವಿಕ್ರಯಾದಿ ಲೌಕಿಕ ವ್ಯವಹಾರಗಳನ್ನು ಬಿಟ್ಟು, ವನಿತಾದಿ ವಿಷಯವಿರಕ್ತನಾಗಿ, ಬಳಿಕ ಈ ಭವರಣ್ಯ ಮಧ್ಯದ ಲೋಭವೆಂಬ ಕೆಸರಿಗೆ ಕಾಲಿಕ್ಕದೆ, ಇಂದ್ರಿಯಗಳೆಂಬ ರಿಪುಗಳನ್ನು ಲೆಕ್ಕಿಸದೆ, ಮೋಹವೆಂಬ ಪಿಶಾಚಿಗೆ ಹೆದರದೆ, ಕ್ರೋಧವೆಂಬ ವ್ಯಾಘ್ರಕ್ಕೆ ಸಿಕ್ಕದೆ, ಮಮತೆಯೆಂಬ ಸರ್ಪದ ಭೀತಿಯಿಲ್ಲದೆ, ಮನ್ಮಥನೆಂಬ ಕಳ್ಳನ ಕೈಗೆ ಬೀಳದೆ, ಮದವೆಂಬ ಅಂಧಕಾರದಲ್ಲಿ ಕಂಗೆಡದೆ, ತಾಪತ್ರಯವೆಂಬ ಗುಳಿಯಲ್ಲಿ ಬೀಳದೆ, ವಿಷಯವೆಂಬ ಮುಳ್ಳನ್ನು ತುಳಿಯದೆ, ಅಸೂಯೆಯೆಂಬ

ವಿಷಲತೆಯಲ್ಲಿ ತೊಡರಿ ಬೀಳದೆ, ಅಹಂಕಾರವೆಂಬ ಮಡುವಿನಲ್ಲಿ ಮುಳುಗದೆ ಸರ್ವಾವಧಾನಿಯಾಗಿ ಜಂಗಮ ಸ್ಥಲವನ್ನು ಅಂಗೀಕರಿಸಿ ಸಂಚರಿಸುವಾತನೇ ನಿರಾಭಾರಿ ವೀರಶೈವನು.[೧]

ಮುರುಘೇಂದ್ರರು ವೀರಶೈವನಾಗುವದು ಹೇಗೆ ಎಂಬುದನ್ನು ಈ ಮೇಲಿನಂತೆ ಹೇಳಿದ್ದಾರೆ. ಈ ಮೂರರಲ್ಲಿನ ಅಂಶಗಳನ್ನು ಅಳವಡಿಸಿಕೊಂಡರೆ ಮಾತ್ರ ಆತ ಈ ಭವ ಜೀವನವನ್ನು ದಾಟುತ್ತಾನೆ. ಕೇವಲ ಗಾತ್ರವುಳ್ಳ ಲಿಂಗವನು ಧರಿಸಿದರೆ ಅದು ಸಾಧ್ಯವಾಗುವುದಿಲ್ಲವೆಂದಿದ್ದಾರೆ.

೧.೭ ಲಿಂಗಾಯತ

"ಲಿಂಗವಂತರೆಲ್ಲರು
ಅಂಗಕಮೆಚ್ಚಿ ಭಂಗಪಡುವದಾಯಿತು
ಮಂಗಳಾತ್ಮಕ ಭವಭಂಗ ಶಿವನ್ನಿಂಗೀತು
ಮಂಗನಂದದಿ ಭವಿಸಂಗ ಮಾಡುವದಾದ್ದೊ"[೨]

ಲಿಂಗಾಯತರ ಧರ್ಮದ ನಿಯಮಗಳಲ್ಲಿ ಲಿಂಗವಂತನಾದವನು ಯಾವಾಗಲು 'ಅಂಗದ ಮೇಲೆ ಲಿಂಗ'ವನ್ನು ಧರಿಸಬೇಕು ಎಂದು ಹೇಳುತ್ತದೆ. ಅದರಂತೆ ಎಲ್ಲ ಲಿಂಗವಂತರು ಲಿಂಗ ಧರಿಸುತ್ತಾರೆ. ಹೀಗೆ ಲಿಂಗಧರಿಸುವವರೆಲ್ಲರು ಶಿವಭಕ್ತರಾಗುವುದಿಲ್ಲ. ಕೇವಲ ಆಡಂಭರಕ್ಕಾಗಿ ಲಿಂಗ ಧರಿಸುವವರೂ ಕಂಡು ಬರುತ್ತಾರೆ. ವೀರಶೈವರ ನಿಯಮತತ್ವಗಳನ್ನು ಮೀರಿ ನಡೆಯುವವರು ಲಿಂಗ ಧರಿಸುವುದರಿಂದ ಭಂಡಪಡುವದಾಯಿತು ಎಂದು ಇಲ್ಲಿ ತಮ್ಮ ವಿಚಾರ ಹೇಳಿದ್ದಾರೆ. ಮುಂದುವರೆದು ಹೀಗೆ ಆಡಂಬರಕ್ಕಾಗಿ ಲಿಂಗ ಧರಿಸುವವರ ಆತ್ಮಶುದ್ಧವಾಗಿರುವುದಿಲ್ಲ. ಇದಕ್ಕೆ ತಕ್ಕ ಉದಾಹರಣೆ ಇಂದಿನ ಜಾತೀವಾದಿಗಳನ್ನು, ದೊಡ್ಡ ದೊಡ್ಡ ಮಠಾಧೀಶರರನ್ನು ನೋಡಬಹುದು. ಇವರು ತಮಗೆ ಅನುಕೂಲವಾಗುವಂತೆ ತಮ್ಮ ನಿಯಮಗಳನ್ನು ಬದಲಾಯಿಸುತ್ತಾರೆ ಅವರು ಹೇಳಿದ ಮಂತ್ರವೇ ವೇದವಾಕ್ಯವಾಗುತ್ತವೆ. ಮಂಗಗಳಂತೆ ಆಡುವ ಇಂಥ ವರ್ಗದವರಿಗೆ ಶಿವನು ಎಂದಿಗೂ ಮೆಚ್ಚುವುದಿಲ್ಲ ಅವರಿಗೆ ಅರಿವುಂಟಾಗುವುದು ಅವರ ಆತ್ಮದಿಂದಲೇ ಎಂದು ಕಪಟಿಗಳನ್ನು ಕುರಿತು ಇಲ್ಲಿ ವಿಮರ್ಶಿಸಿದ್ದಾರೆ.

"ಕುಲಛಲ ವಂದಾಯಿತೋ
ವಲಿ ಮಾದರ ಕಾಲು ಬೀಳುವದಾಯಿತೊ
ಮೇಲಾದ ಕಾಲ್ಹರಿ ಆಡಯಕೆ ಬಂದರ
ಚಾಲಲೀಲನೆಂದು ಬೈಲಿನೊಳಗೆ ತಳ್ಳಿತು"[೨]

ಹರಿಜನರಾದರೇನು? ಗಿರಿಜನರಾದರೇನು? ಅವರನ್ನು ಅಸಡ್ಡೆಯಿಂದ ಕಾಣಬಾರದು. ಅಸ್ಪೃಶ್ಯರೆಂದರೆ ನೀಚ ಸ್ವಭಾವದವರು, ಕ್ರೂರಿಗಳು, ನಾಸ್ತಿಕರೇ ಮೊದಲಾದವರು. ಭಗವಂತನಿದ್ದಾನೆ ಎಂಬ ಭಾವವಿಟ್ಟು

ದಯ ಮತ್ತು ಧರ್ಮವನ್ನು ಪಾಲಿಸುವವರೆಲ್ಲರು ಶ್ರೇಷ್ಠರೇ ಆಗಿರುತ್ತಾರೆ. ಅವರಿಗೆ ಯೋಗ್ಯತಾನುಸಾರವಾಗಿ ಅವರಿಗೆ ಮನ್ನಣೆ ಮರ್ಯಾದೆಗಳನ್ನು ಕೊಡಲೇಬೇಕೆಂಬ ಭಾವನೆ ಇಲ್ಲಿ ವ್ಯಕ್ತಪಡಿಸಲಾಗಿದೆ.

ಮೂಲತತ್ವಗಳನ್ನು ತಿದ್ದಿ ತಮಗೆ ಅನುಕೂಲವಾಗುವಂತೆ ಮಾರ್ಪಡಿಸಿಕೊಂಡವರು ಜನಸಾಮಾನ್ಯರನ್ನು ಹಾದಿ ತಪ್ಪಿಸುತ್ತಾರೆ. ಅದಕ್ಕಾಗಿ ಜನರೆಲ್ಲರು ಕುಲ-ಕುಲ ಎಂದು ಬಡಿದಾಡದೇ ಎಲ್ಲರು ಕುಲ-ಛಲದಿಂದ ಒಂದಾದರೆ, ಇಲ್ಲಿಯವರೆಗೂ ಕಂಡುಬರುತ್ತಿದ್ದ ಜಾತಿ ಪ್ರಾಬಲ್ಯ ಕಡಿಮೆಯಾಗಿ, ಕಪಟ ಧರ್ಮಪ್ರವರ್ತಕರು ನಿರ್ಮಿಸಿಕೊಂಡ ಜಾತೀಯ ಅಂತಸ್ತುಗಳನ್ನು ತೊಡೆದು ಹಾಕಬಹುದು. 'ಬಸವಾದಿ ಶರಣರು ಎಲ್ಲರು ಒಂದೇ' ಎಂಬ ತತ್ವ ಸಿದ್ಧಾಂತದಲ್ಲಿ ನಿರ್ಮಿಸಿದ ವೀರಶೈವ ಸಮಾಜ ಮತ್ತೆ ಸ್ಥಾಪಿಸಿದರೆ ಈ ಎಲ್ಲ ಕಪಟಿಗಳು ಹೊಲೆಯ, ಮಾದಿಗ ಎಂದು ಯಾರನ್ನು ಕರೆಯುವರೋ, ಅವರ ಒಗ್ಗಟ್ಟಿನ ಸಮಾನತೆಯಿಂದಾಗಿ ಅವರ ಕಾಲು ಬೀಳಬೇಕಾಗುತ್ತದೆ. ಖಂಡಿತವಾಗಿ ಇಂತವರು ಕ್ಷಮೆ ಕೋರಿ ಬಂದರೂ ಅವರನ್ನು ಕ್ಷಮಿಸಬಾರದು. ನಾಯಿಗಳು ಸಿಂಹಾಸನದ ಮೇಲೆ ಕುಳಿತರು ಹೊಲಸಿನ ವಾಸನೆಗೆ ಮತ್ತೇ ತನ್ನಲ್ಲಿನ ಗುಣ ಪ್ರದರ್ಶಿಸುವಂತೆ ಇವರು ಸಮಯ ಸಿಕ್ಕಾಗಲೆಲ್ಲಾ ಮತ್ತೆ ತಮ್ಮ ಮೂಲಕ್ಕೆ ಹೋಗುತ್ತಾರೆ ಆದ್ದರಿಂದ ಅಂತವರು ಕ್ಷಮೆ ಕೋರಿ ಬಂದರೂ ಅವರನ್ನು ಜನಸಮುದಾಯಗಳಲ್ಲಿ ಸೇರಿಸದೆ ಊರ ಹೊರಗಿನ ನಿರ್ಜನ ಬೈಲಿನೊಳಗಿಡಬೇಕೆಂದು ಮುರುಘೇಂದ್ರಸ್ವಾಮಿಗಳು ಸಲಹೆ ನೀಡಿದ್ದಾರೆ.

ಈ ಮೇಲಿನ ವಿಚಾರಗಳು ಧರ್ಮ-ಧರ್ಮಗಳೆಂದು ಜನರನ್ನು ಮೋಸಗೊಳಿಸುವವರಿಗಾದರೆ ಈ ಕೆಳಗೆ ಶ್ರೀಮಂತರನ್ನು ಎಚ್ಚರಿಸಿದ್ದಾರೆ.

"ದೇಸಾಯಿ ಧೊರಿಗಳಂತು
ಆಶದಿ ಮೋಸೆನು ಪಾಶ ಬೀಳುವದಾಯಿತೊ
ಘೋಷಂ ವಶವಿಧ ಭಾಷೆಯಾಶಿಸದೆ
ಈಶ ಕರಿಘೂಳೇಶನ ಧ್ಯಾನವು ಮೆರೆದಿತ್ತು"[೨೮]

ಸಮಾಜದಲ್ಲಿ ಶ್ರೀಮಂತರೆನಿಸಿಕೊಂಡವರು ತಮ್ಮ ಹಣ ಬಲದಿಂದ ತಮಗೆ ಅನುಕೂಲವಾಗುವಂತೆ ಜನರನ್ನು ಆಟ ಆಡಿಸುತ್ತಾರೆ. ಹಣ ಮತ್ತು ಇನ್ನಿತರ ವಸ್ತುಗಳ ಆಶೆ ತೋರಿಸಿ ಅವರನ್ನು ತಮ್ಮ ವಶದಲ್ಲಿ ಇಟ್ಟುಕೊಳ್ಳುತ್ತಾರೆ. ಇದಕ್ಕೆ ತಕ್ಕ ಉದಾಹರಣೆಯೆಂದರೆ ಕ್ರೈಸ್ತ ಧರ್ಮ ತನ್ನ ಪ್ರಚಾರ ಮತ್ತು ಧರ್ಮವನ್ನು ಭಾರತದಲ್ಲಿ ಬೆಳೆಸಲು ಹಣವನ್ನು ಮತ್ತು ಇತರ ಅನುಕೂಲಗಳನ್ನು ಕೆಳಸಮುದಾಯಗಳಿಗೆ ನೀಡಿ ಅವರನ್ನು ತಮ್ಮ ಧರ್ಮದ ತೆಕ್ಕೆಯ ಒಳಗೆ ಬಂಧಿಸಿಟ್ಟಿತು. ಇದರಿಂದ ಮತಾಂತರ ಹೊಂದಿದ ಜನರು ಪೂರ್ಣ ರೂಪದಲ್ಲಿ ಆ ಕಡೆಗೂ ಇಲ್ಲ, ಈ ಕಡೆಗೂ ಇಲ್ಲದೆ ದುಃಸ್ಥಿತಿಯಲ್ಲಿ ತಮ್ಮ ತಮ್ಮ ಜೀವನ ನಿರ್ಮಿಸಿದರು, ಹೀಗೆ ಧರ್ಮಾಂತರಗೊಂಡವ ಕೇವಲ ಕ್ರೈಸ್ತಧರ್ಮದಲ್ಲಿ ಮಾತ್ರವಲ್ಲ ಅನೇಕ ಪ್ರಮುಖ ಧರ್ಮಗಳಲ್ಲಿಯು ದೇಸಾಯಿಗಳ, ದೊರೆಗಳು ಆಸೆ ಹುಟ್ಟಿಸುವದರಿಂದ ಅಲ್ಲಿ ಸೇರಿದರು.

ಹೀಗೆ ಗೊತ್ತುಗುರಿ ಇಲ್ಲದೇ ಹತ್ತು ಧರ್ಮಗಳಲ್ಲಿ, ಹತ್ತಾರು ಭಾಷೆಗಳಲ್ಲಿ ಹೆಸರಿಗೆಂಬಂತೆ ಸೇರುವವರ ಒಂದು ದೇವರೆನ್ನದೆ ಹಲವಾರು ದೇವರೆಂದು ನೂರಾರು ಕಡೆಗಳಲ್ಲಿ ತಿರುಗಾಡಿ ಕೊನೆಗೆ ಮೂಲದೇವರನ್ನು (ಕರಿಘೂಳೇಶ್ವರನನ್ನು) ನೆನೆಯಲು ಸಾಧ್ಯವಾಗುವುದಿಲ್ಲ ಎಂದು ಹೇಳಿದ್ದಾರೆ.

### ೧.೮ ಜೋಗುಳ ಪದ

ಜಾನಪದದ ತಾಯಿಬೇರನ್ನು ಜನಪದರಲ್ಲಿ ಕಾಣಬಹುದು. ಜನಪದರಲ್ಲಿ ರೂಢಿಯಲ್ಲಿರುವ ಅನೇಕ ಸಾಹಿತ್ಯ ಪ್ರಕಾರಗಳಲ್ಲಿ ಈ ಜೋಗುಳ ಹಾಡು ಸಹ ಒಂದು. ತಾಯಿಯ ಗರ್ಭದಿಂದ ಹೊರ ಬಂದ ಶಿಶುವಿನ ಬೆಳವಣಿಗೆಯ ವಿವಿಧ ಸಂದರ್ಭದಲ್ಲಿ ಈ ಜೋಗುಳ ಪದಗಳನ್ನು ಹಾಡುವುದು ಕಾಣುತ್ತೇವೆ. ಅದೇ ರೀತಿ ಪವಾಡ ಪುರುಷರ ಹಬ್ಬ, ಉತ್ಸವಗಳಲ್ಲಿ ದೇವರನ್ನು ಕುರಿತು ಜೋಗುಳ ಹಾಡು ಹಾಡಿ ದೇವರನ್ನು ವರ್ಣಿಸಲಾಗುವುದು.

"ಜೋ ಜೋಯನ್ನರಿ ಶಿವಸತಿ ಸುತಗೆ
ಜೋ ಜೋಯನ್ನರಿ ಭವತತಿ ಹತಗೆ
ಜೋ ಜೋಯನ್ನರಿ ಜೋ ಘನಯತಿಗೆ
ಸದಾ ಜೋ ಯಂದು ಪಾಡಿರಿ ಸಮ ಹೃದಯನಿಗೆ ಜೋ ಜೋ"[೫೯]

ಮುರುಘೇಂದ್ರಸ್ವಾಮಿಗಳು ಈ ಜೋಗುಳ ಪದದಲ್ಲಿ ಬಸವಣ್ಣನ ನಾಮಕರಣದ ಸಂದರ್ಭವನ್ನು ಚಿತ್ರಿಸಿದ್ದಾರೆ. ಭೂಲೋಕದ ವಾರ್ತೆಯನ್ನು ನಾರದನಿಂದ ಕೇಳಿದ ಶಿವಸತಿಯರು ಭೂಲೋಕವನ್ನು ಉದ್ಧರಿಸಲು ಬಸವನನ್ನು ಕಳುಹಿಸುವರು. ಅದಕ್ಕಾಗಿಯೇ ಈ ಜೋಗುಳ ಪದದ ಆರಂಭದಲ್ಲಿ ಜೋ ಜೋಯನ್ನರಿ ಶಿವಸತಿ ಸುತಗೆ ಎಂದು ಅವರು ಹಾಡಿದ್ದಾರೆ. ಮಾತ್ರ ಹೃದಯದಿಂದ ಹೊರಡುವ ಪ್ರತಿಯೊಂದು ಶಬ್ದಗಳು ಸುಂದರ ರೂಪ ಪಡೆದು ಜೋಗುಳ ಪದವಾಗಿ ಹೊರಹೊಮ್ಮುತ್ತವೆ. ಇದರಂತೆ ಶರಣರ ವಾಣಿಯಿಂದ ಜಗತ್ತು ಶಾಂತಿ ಮತ್ತು ಸಮೃದ್ಧಿಯಿಂದ ಕೂಡಬೇಕು. ಆ ರೀತಿ ಶ್ರಮಿಸಿದ ಶರಣ ಬಸವಣ್ಣನವರಿಗೆ ಮುರುಘೇಂದ್ರಸ್ವಾಮಿ ಜೋಗುಳ ಹಾಡಿದ್ದಾರೆ. ಲೋಕ ಕಲ್ಯಾಣಕ್ಕಾಗಿ ಶ್ರಮಿಸಿ, ತಮ್ಮ ಬದುಕನ್ನು ಅದರಲ್ಲಿ ಸವೆಸಿದ ಎಲ್ಲಾ ಶಿವ ಶರಣ-ಶರಣೆಯರಿಗೆ ಸದಾ ಜೋ ಜೋ...ಎನ್ನಬೇಕು ಎಂಬುದೇ ಇಲ್ಲಿಯ ಆಶಯ.

### ೧.೯ ಯಾತ್ರೆ

ಆಧುನಿಕ ಜನಜೀವನದ ಪ್ರಮುಖ ಮನೋರಂಜಕ ಕಾರ್ಯಕ್ರಮಗಳಲ್ಲಿ ಪ್ರವಾಸವೂ ಸೇರಿದೆ. ಇದೊಂದು ಮನೋಲ್ಲಾಸದ ಕ್ರಿಯೆ. ಪ್ರಪಂಚದ ಅನೇಕ ದೇಶಗಳಲ್ಲಿ ಪ್ರವಾಸಕ್ಕಾಗಿಯೇ ಕೆಲವು ದಿನಗಳನ್ನು ಮೀಸಲಾಗಿರಿಸಿವೆ. ನಾಲ್ಕೈದು ದಿನಗಳವರೆಗೆ ಸತತವಾಗಿ ಶ್ರದ್ಧೆಯಿಂದ ದುಡಿದ ದೇಹ ಮನಸ್ಸುಗಳಿಗೆ ಪ್ರವಾಸದ ಆಹ್ಲಾದದಿಂದ ನವಚೈತನ್ಯವುಂಟಾಗಿ ಜೀವನದಲ್ಲಿಯೂ, ಕಾಯಕದಲ್ಲಿಯೂ

ಉತ್ಸಾಹ ಚಿಮ್ಮಲೆಂದು ಇದರ ಘನೋದ್ದೇಶವೆನಿಸುತ್ತದೆ. ಪ್ರಕೃತಿಯ ರಮಣೀಯ ಸ್ಥಳಗಳಾದ ವಿಶಾಲವಾದ ಮಗ್ಗುಲುಗಳು, ದೊಡ್ಡ ದೊಡ್ಡ ಝರಿಗಳು, ಸಮುದ್ರ, ಮಲೆನಾಡಿನ ಮೈಲಿಗಳುದ್ದದ ಹಸಿರುಟ್ಟ ವನಪ್ರದೇಶವೇ ಮುಂತಾದ ತಾಣಗಳು ಪ್ರೇಕ್ಷಣೀಯ ಸ್ಥಳಗಳಾಗಿರುವುದರೊಡನೆ ಭರತಖಂಡದಲ್ಲಿ ಧರ್ಮ ಹಾಗೂ ಕಲೆಗಳ ಸಂಗಮವೆಂದೆನಿಸಿಕೊಂಡಿರುವ ಅನೇಕ ಕ್ಷೇತ್ರಗಳು ದೇವತಾ ಸನ್ನಿಧಾನದಿಂದ ಕೂಡಿ ಪವಿತ್ರವಾಗಿವೆ. 'ದೇಶ ತಿರುಗುವುದರಿಂದಲೂ ಕೋಶ ಓದುವುದರಿಂದಲೂ' ಮಾನವನ ಅನುಭವ ವಿಸ್ತಾರವಾಗುತ್ತದೆ ಎಂಬ ಮಾತೊಂದಿದೆ. ಭರತಖಂಡದ ಅನೇಕ ಕ್ಷೇತ್ರಗಳು ಕೇವಲ ಆಯಾ ಧಾರ್ಮಿಕ ಜನರನ್ನಲ್ಲದೆ ವಿದೇಶಿಯರನ್ನು, ಪರಧರ್ಮಿಯರನ್ನು ಆಕರ್ಷಿಸುತ್ತಿರುವುದು ಸರ್ವವಿಧಿತವಾಗಿದೆ. ಭರತಖಂಡದ ಅನೇಕ ಕ್ಷೇತ್ರಗಳು ಒಂದಲ್ಲ ಒಂದು ಧರ್ಮದ ವಲಯದಲ್ಲಿ ಬೆಳೆದಿದ್ದರೂ ಆ ಧರ್ಮಕ್ಕೆ ಪ್ರೋತ್ಸಾಹ ನೀಡುವುದರೊಡನೆ ಪ್ರಾಚೀನ ಕಾಲದ ರಾಜರು, ಶ್ರೀಮಂತರು ಪರೋಕ್ಷವಾಗಿಯೂ ಪ್ರತ್ಯಕ್ಷವಾಗಿಯೂ ವಿವಿಧ ಕಲೆಗಳಿಗೆ ವಿಪುಲ ಪ್ರೋತ್ಸಾಹವನ್ನು ನೀಡಿದ್ದಾರೆ. ಭರತ ಖಂಡದ ಸುಪ್ರಸಿದ್ಧ ಕ್ಷೇತ್ರಗಳಾದ ಕಾಶಿ ರಾಮೇಶ್ವರ, ಮಧುರೆ, ಪುರಿ ಜಗನ್ನಾಥ, ಅಜಂತ, ಎಲ್ಲೋರ, ಹಂಪೆ, ಕಂಚಿ, ಕಾಳಹಸ್ತಿ, ತಿರುಪತಿ, ಉಡುಪಿ, ಪಂಢರಪುರ, ಕುಂಭಕೋಣ ಇತ್ಯಾದಿ ಇನ್ನು ಅನೇಕ ಕ್ಷೇತ್ರಗಳು ಕೇವಲ ಆಧ್ಯಾತ್ಮಿಕ ದೃಷ್ಟಿಯನ್ನು ಬಳಸಿಕೊಂಡ ಜನರನ್ನಲ್ಲದೆ ಕಲಾಭಿಜ್ಞರೆಲ್ಲರನ್ನು ಆಕರ್ಷಿಸುತ್ತಿದೆ.

ಮನುಷ್ಯ ಹಿಂದೆ ಮಾಡಿದ ದುಷ್ಕರ್ಮಗಳನ್ನು ನೆನೆದು ಅಂತಹ ಕಾರ್ಯ ಮುಂದೆ ತನ್ನಿಂದಾಗದಂತೆ ನೋಡಿಕೊಳ್ಳಬೇಕೆಂದು ಮೊರೆಯಿಟ್ಟರೂ, ಮನಸ್ಸಿನ ದೌರ್ಬಲ್ಯದಿಂದಲೂ, ಜ್ಞಾನ-ಭಕ್ತಿಗಳನ್ನು ಅಂತರಂಗವನ್ನು ಹಾಸುಹೊಕ್ಕಾಗಿ ಆವರಿಸದಿರುವುದರಿಂದಲೇ ಏನೋ ಮತ್ತೆ ಮತ್ತೆ ಚಿತ್ತಚಾಂಚಲ್ಯ ಹೊಂದಿ ಬಯಸಲಾರದುದನ್ನು ಬಯಸಿದಾಗ ಅವರಿಗಾಗುವ ದುಃಖ ಹೇಳಲಸಾಧ್ಯ. ಆದುದರಿಂದಲೇ ಭಕ್ತನೊಬ್ಬನು ತನ್ನ ಆತ್ಮ ಪರಿಶುದ್ಧ ಹೊಂದುವ ಕಾಲವನ್ನೇ ನಿರೀಕ್ಷಿಸುತಾ ಅದಕ್ಕಾಗಿ ಅನಂತ ಕಾಲವೇ ನಿರಂತರ ಪ್ರಯತ್ನಶೀಲವಾಗುವುದರಿಂದ ಜೀವನದಲ್ಲಿ ಯಾತ್ರೆಯನ್ನು ಕೈಗೊಳ್ಳುತ್ತಾನೆ.

ದೇವರು ದೇವರು ಎಂದು ಲೋಕದಲ್ಲಿನ ದೇವಾಲಯಗಳನ್ನು ಸಂದರ್ಶಿಸಿ ಪ್ರಾರ್ಥಿಸುವವರೆಲ್ಲರನ್ನು ಭಕ್ತರೆಂದು ಹೇಳಲಾಗುವುದಿಲ್ಲ ಅಥವಾ ಭಕ್ತರೆಂದು ಅವರು ಭಾವಿಸಿದರೂ ಭಗವಂತ ಅವರನ್ನು ಭಕ್ತರೆಂದು ಪರಿಗಣಿಸುವುದಿಲ್ಲ. ಆದ್ದರಿಂದ ಮುರುಘೇಂದ್ರಸ್ವಾಮಿಗಳು ದೇವರೆಂದು ಆ ಯಾತ್ರ, ಈ ಯಾತ್ರಾಗಳೆಂದು ದೇಶ ಸುತ್ತುವವರನ್ನು ಕುರಿತು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ.

"ಕಾಸಿಗ್ಹೋಗ್ಬದ್ಯಾಕೊ
ತೀರ್ಥ ತಂದು ಬ್ಯಾಸರಾಗ್ಬದ್ಯಾಕೊ
ಸೋಸಿ ನೋಡಿ ಭವದಾಸೆ ತ್ಯಜಿಸಲು
ಕಾಶಿತೀರ್ಥ ತನ್ನ ಕಣ್ಣೊಳಗಿರುವುದು"[೨೦]

ಇಲ್ಲಿ ಮುರುಘೇಂದ್ರಸ್ವಾಮಿಗಳು ನಮ್ಮ ದೇಹವನ್ನೇ ತೀರ್ಥಕ್ಷೇತ್ರವೆಂದು ತಿಳಿಸಿದ್ದಾರೆ. ಈ ಭೂಮಿಯಲ್ಲಿ ಹುಟ್ಟಿದ ಪ್ರತಿಯೊಂದು ಜೀವಿಯು ತನ್ನಲ್ಲಿ ಆಸೆಯೆಂಬುದನ್ನು ಅಡಗಿಸಿಕೊಂಡಿರುತ್ತದೆ. ಎಷ್ಟೆ ದೊರೆತರೂ ಮತ್ತಷ್ಟು ಬೇಕೆಂದು ಮನುಷ್ಯನ ಆಸೆ ಸಮುದ್ರದಷ್ಟು ಅಗಲವಾಗಿ ಹರಡಿಕೊಂಡ ಆಕಾಶದೆತ್ತರದಷ್ಟು ನೆಗೆಯುತ್ತದೆ. ಒಂದೊಂದು ಆಸೆ ತನ್ನದಾದಾಗ ಮತ್ತೊಂದು ಮಗದೊಂದು ಆಸೆ ಬಯಸುವ ಈ ಮನ ಅದಕ್ಕಾಗಿ ಯೋಗ್ಯವಲ್ಲದ ಮಾರ್ಗದಲ್ಲಿ ನಡೆಯುತ್ತದೆ. ಇದು ಸರಿಯಲ್ಲವೆಂದು ತಿಳಿದಾಗ ಮಾಡಿದ ತಪ್ಪಿಗಾಗಿ ಪಶ್ಚಾತ್ತಾಪಪಟ್ಟು ದೇವರು ದೇವರು ಎಂದು ಯಾತ್ರಾಸ್ಥಳಗಳಿಗೆ ತಿರುಗುತ್ತಾನೆ. ಈ ಭವದ ಆಸೆ ಬಿಟ್ಟರೆ ಹೀಗೆ ತಿರುಗುವುದು ಅವಶ್ಯವಾಗುವುದಿಲ್ಲ. ಕಾಸಿಗ್ಹೋಗ್ಬಾದ್ಯಾಕೊ ತೀರ್ಥ ತಂದು ಬ್ಯಾಸರಾಗ್ಬದ್ಯಾಕೊ ಎಂಬುದರಲ್ಲಿ ತೀರ್ಥಕ್ಷೇತ್ರಗಳಲ್ಲಿನ ತೀರ್ಥ ತಂದು ಕುಡಿದರೆ ಮಾಡಿದ ತಪ್ಪು ಮನ್ನಿತವಾಗುವುದಿಲ್ಲ, ಬದಲಾಗಿ ಪಶ್ಚಾತ್ತಾಪ ಪಟ್ಟು ಕಣ್ಣಲ್ಲಿ ನೀರು ಬಂದರೇ ಅದೇ ತೀರ್ಥವೆಂದು ಹೇಳಿದ್ದಾರೆ.

ಯಾವುದೇ ತೀರ್ಥಕ್ಷೇತ್ರದ ತೀರ್ಥ ಕುಡಿದರೇನು, ಆ ತೀರ್ಥದಲ್ಲಿ ಮುಳುಮುಳಗಿ ಎದ್ದರೇನು ನಮ್ಮ ಮನಸ್ಸಿನಲ್ಲಿ ಪರಿಶುದ್ಧ ಭಾವನೆ ಇಲ್ಲದಿದ್ದರೆ.

"ಏನು ಮಾಡಿದರೇನು ಏನು ಇಲ್ಲ
ನಿನ್ನ ಮನದವಗುಣ ಬಂದು ಮಾಡಿಲ್ಲ
ಕಾಶಿ ತೀರ್ಥ ತಂದೆನಂದಿ
ರಾಮೇಶ್ವರದೊಳು ಸ್ನಾನಮಾಡಿ ನೀ ಬಂದಿ
ದೇಶ ದೇಶ ತಿರುಗಿ ನೀ ನೊಂದಿ
ಧ್ಯಾಸವಿಲ್ಲದೆ ಸನ್ಯಾಸಿ ವೇಷದೊಳೊಂದಿ" ||೧||
"ಸತಿ ಸುತರನು ತ್ಯಾಗಮಾಡಿ
ಮಂದಗತಿಗೆ ಹೊಂದುವೆನೆಂದು ಕೀರ್ತಿಕೊಂಡಾಡಿ
ಹಿತದಿಂದ ಯತಿರೊಳುಕೂಡಿ
ಚಿತ್ರ ಮಲೆಗೆಟ್ಟ ಹೋಗತಿರಿ ಯಮಪುರಕಡಿ ||೨||
ಜಂಭತನವ ನಿನಗ್ಯಾಕೊ
ಹಾಳ ಹಂಬಲಬಿಡು ಶಾಸ್ತ್ರ ಹೇಳಿದು ಸಾಕೊ
ತುಂಬಿದ ದುರ್ಗಣ ನೂಕೊ
ನೀಲಂಬ ಮಾಣಿಕ್ಯ ಮುತ್ತು ತಿಳಿದರ ಸಾಕೊ"[೩೧] ||೩||

ನಮ್ಮ ಸುತ್ತಲಿನ ಜನರನ್ನು ನೋಡಿದಾಗ ನಮಗೆ ಆಶ್ಚರ್ಯವಾಗುತ್ತದೆ. ತಮ್ಮ ಪ್ರತಿಷ್ಠೆಯನ್ನು ಸಮಾಜದಲ್ಲಿ ಸ್ಥಾಪಿಸಿಕೊಳ್ಳಬೇಕೆಂದು ನಾನಾತರಹದ ಚಟುವಟಿಕೆಯಲ್ಲಿ ತೊಡಗಿಕೊಳ್ಳುತ್ತಾರೆ. ತಾವು ಸಾಗುವ ಮಾರ್ಗದಲ್ಲಿ ಮಾಡಬಾರದನ್ನೆಲ್ಲ ಮಾಡಿದರೂ ಅದನ್ನು ಗುಪ್ತವಾಗಿಟ್ಟುಕೊಂಡರು ಮನಸ್ಸಿನಲ್ಲಿ ಆ ಕೊರಗು ಕೊರೆಯುವುದರಿಂದ, ದೇವರ ಮೊರೆ ಹೋಗಿ ಸಾಧು ಸಂತರ ವೇಷ ಧರಿಸಿ ಕಾಶಿಯ ತೀರ್ಥ ಕುಡಿದು, ರಾಮೇಶ್ವರದೊಳು ಸ್ನಾನ ಮಾಡಿ ಬಂದರೂ ಪಾಪ ಕಡಿಮೆಯಾಗುವುದಿಲ್ಲ. ಸಂಸಾರದಲ್ಲಿದ್ದರೆ ದೇವರ ಸಾಮಿಪ್ಯಕ್ಕೆ ಸೇರಲು ಹೆಂಡತಿ ಮಕ್ಕಳು ಅಡ್ಡಬರುವವರೆಂದು ಅವರನ್ನು ತ್ಯಜಿಸಿದ ಮಾತ್ರಕ್ಕೆ ದೇವರ ಭಕ್ತನಾಗುವುದಿಲ್ಲ. ಬದಲಾಗಿ ಕಾಮ-ಮೋಹದಿಂದ ದೂರಾಗದ ನೀನು ಪರಸ್ತ್ರೀಯ ಸಂಗ ಮಾಡಿ ಅದರಿಂದ ಹುಚ್ಚನಾಗಿ ಅಲೆದಾಡುವಾಗ ಸಾವಿಗೆ ಶರಣಾಗುವೆ.

ಈ ರೀತಿ ದೇವರಿಗಾಗಿ, ಮೋಕ್ಷಕ್ಕಾಗಿ ತಿರುಗಿ ಬಂದು ಕೊನೆಗೆ ಇಲ್ಲಿಯೇ ಈಶನ ದರ್ಶನವಾಯಿತು.

"ದೇಶ ದೇಶವ ತಿರುಗಿ ಬ್ಯಾಸತ್ತು ಬಂದರೆ
ಈಶನ ದರುಶನವಾಗಲಿಲ್ಲಮ್ಮಾ
ಆಶಾಪುರವ ಬಿಟ್ಟು ಹಾಸನಪುರಕ್ಕೆ ಬಂದೆ
ಅಕ್ಕಾ ನಿಜಪುರದಲ್ಲಿ ಸಿಕ್ಕ ಶಿವನಮ್ಮೆ"[೫೨] ||೧||

ನಾನಾ ಕಡೆಗಳಲ್ಲಿ ದೇವರಿಗಾಗಿ ತಿರುಗಾಡಿದೆ ನನ್ನಲ್ಲಿನ ಆಸೆಯನ್ನು ಬಿಡದೆ ಹಾಸನಕ್ಕೂ ಹೋಗಿ ಬಂದೆ ಶಿವನ ದರ್ಶನವಾಗಲಿಲ್ಲ. ಮರಳಿ ಬಂದು ನಿಶ್ಚಲವಾದ ಭಕ್ತಿಯಿಂದ ಇರಲು ನನ್ನ ನಿಜಪುರದಲ್ಲಿ ಶಿವನೂ ಸಿಕ್ಕನೂ, ಶಿವನಿಗಾಗಿ, ದೇವರಿಗಾಗಿ ಅಲೆಯುವುದು ಬೇಕಾಗಿಲ್ಲ ದೇವರು ಸರ್ವವ್ಯಾಪಿಯಾದ್ದರಿಂದ ನಾವು ನಿಜವಾದ ಪಥದಲ್ಲಿ ನಡೆದರೆ ನಾವಿದ್ದಲ್ಲೇ ದೇವರ ದರ್ಶನವಾಗುವುದು. ಆದ್ದರಿಂದ ಅಷ್ಟಭೋಗಗಳಾದ ಗೃಹ, ಶಯ್ಯ, ವಸ್ತು, ಆಭರಣ, ಸ್ತ್ರೀ, ಪುಷ್ಪ, ಗಂಧ, ತಾಂಬುಲಗಳನ್ನು ನಿಯಂತ್ರಣದಲ್ಲಿಟ್ಟುಕೊಳ್ಳಬೇಕು. ಇವು ನಿಯಂತ್ರಣದಲ್ಲಿರಬೇಕಾದರೆ ಕಾಮ, ಕ್ರೋಧ, ಲೋಭ, ಮದ, ಮತ್ಸರ, ಮೋಹಗಳು ನಮ್ಮಿಂದ ದೂರಾಗಲೇಬೇಕು. ಆಗಲೇ ನಾವು ಇದ್ದಲ್ಲೇ ಆ ದೇವರು ದರ್ಶನವಾಗುತ್ತಾನೆ.

**೧.೧೦ ಹಣೆಬರಹ**

ಮುರುಘೇಂದ್ರಸ್ವಾಮಿಗಳು ದೈವದ ಬಗ್ಗೆ ಮಾತನಾಡುತ್ತ ನಮ್ಮ ಹಣೆಯ ಬರಹವನು (ವಿಧಿಲಿಖಿತ) ನರರೇನು ಬಲ್ಲರು ಗುರುರಾಯನೊಬ್ಬನಿಗೆ ಮಾತ್ರ ಅದು ತಿಳಿಯಲು ಸಾಧ್ಯ.

"ಆರದೈವವು ಆರಿಗೇನುಗುರುತು
ಗುರುರಾಯನ್ನೊರತು
ಆರ ದೈವವು ಆರಿಗೇನು ಗುರುತಾರುಪೇಳಲು ಆರುಸಾಧ್ಯವು
ಆರುಮೂರನು ಅರಿತು ಮಹಾ ಮೇರು ಶಿಖರದಿರುವನ್ನೊರತು"[೫೩]

ದೈವದ ಬಗ್ಗೆ ತಿಳಿಹೇಳುತ್ತಾ ಹಲವು ಉದಾಹರಣೆಗಳನ್ನು ಇಲ್ಲಿ ಹೇಳಿದ್ದಾರೆ. ಬುದ್ಧಿವಂತರು, ಶಿವಭಕ್ತರಾದರೆ ದೈವವನ್ನು ಗೆಲ್ಲಬಹುದು.

"ತರುಳ ಮಾರ್ಕಂಡೇಯಗೊರವಿತ್ತು
ಹದಿನಾರುವರುಷ ಸುಮರಣ ಜನನ ಬ್ರಹ್ಮ ಬರಯಿತ್ತು
ಶ್ರೀಗುರು ನಾರದರ ಬೋಧವ ಅರುವಿನಲಿ ತಾನರಿತು ಭೇದವ
ಮಾರಸಂಹರನೂರವ ಪಡಿದಾಪಾರಮಹಿಮಾನಾದ ತರುತ್ತೊ"[೩೪]

ಭಕ್ತ ಮಾರ್ಕಂಡೇಯನು ಕೇವಲ ಹದಿನಾರು ವರುಷ ಆಯುಷ್ಯವನ್ನು ಪಡೆದಿದ್ದನು. ಎಲ್ಲರಿಗೂ ತಮ್ಮ ಕೊನೆಯ ಗಳಿಗೆ ತಿಳಿದಿರುವುದಿಲ್ಲ. ಬ್ರಹ್ಮನು ಮಾತ್ರ ಇದನ್ನು ಬರೆಯುತ್ತಾನೆ. ತನಗೆ ಹದಿನಾರು ವರ್ಷ ತೀರಿತೆಂದಾಗ ಮಾರ್ಕಾಂಡೇ ಮುನೀಶ್ವರನು ಶಿವನ ಮೊರೆಹೊಕ್ಕು ಯಮನೊಡನಾಡಿ ಯುದ್ಧದಲ್ಲಿ ಜಯ ಸಾಧಿಸಿದ.

"ಸತ್ಯ ಹರಿಶ್ಚಂದ್ರಾನು ತಾನರಿತು
ಸತ್ಯವು ಬಡದಾಸತ್ಯ ನುಡಿಗಳು ನುಡಿಯಲಿಲ್ಲನಿತು
ಸತ್ಯನುಡಿದದರಿಂದ ಸತಿಸುತ
ಮಿಥ್ಯಾರಾಗಿ ಮರ್ತ್ಯದೊಳಗೆ
ಸತ್ಯ ಪ್ರೇತಗಳಿಡುವ ಪೃಥಿಯ
ಸತ್ಯದಿ ಕಾಯುದಾಯ್ತು"[೩೫]

ಬ್ರಹ್ಮನು ಬರೆದ ಹಣೆಬರಹವನ್ನು ನಾವು ಓದಬಹುದಾಗಿದ್ದರೆ ಸತ್ಯಹರಿಶ್ಚಂದ್ರ ಸತ್ಯವನ್ನು ಪಾಲಿಸುತ್ತಿರಲಿಲ್ಲ. ಏಕೆಂದರೆ ಅವನಿಗೆ ಗೊತ್ತಿರಲಿಲ್ಲ ಸತ್ಯವನ್ನು ಪರಿಪಾಲಿಸುವುದರಿಂದ ಹೆಂಡತಿಯನ್ನು ಮನೆಗೆಲಸಕ್ಕೆ ಕಳುಹಿಸುವುದು, ಮಗನನ್ನು ಕಾಡಿಗೆ ಕಟ್ಟಿಗೆಗೆ ಕಳಿಸುವುದು ಮತ್ತು ಸ್ವತಃ ಅರಸೊತ್ತಿಗೆಯನ್ನು ಬಿಟ್ಟು ಸತ್ತ ಹೆಣಗಳನ್ನು ರುದ್ರಭೂಮಿಯಲ್ಲಿ ಕಾಯುವುದು ಅವನಿಗೆ ಬೇಕಿತ್ತೆ.

"ಧರಿಯೊಳಿರೊ ಕರಿಪುರದವರಧಾತು
ಧೂರಿ ಧರ್ಮರಾಜನು ಮರಿಯದಲೆ
ಧರ್ಮ್ಮದಲಿ ನಡಿದಾಯ್ತು
ಕರುಪಾಂಡವರು ಆಡಿತಿತ್ತೆ
ಸರ್ವರಾಜ್ಯವು ಸೋಲದಾಯ್ತು

ಯರಡಾರೊರುಷಾರಣ್ಯದಿರುತ

ತಿರಿದು ಮನಿಮನಿ ತಿರುಗೊದಾಯ್ತು"[೩೬]

ಜೀವನದಲ್ಲಿ ಮುಂದೆ ಘಟಿಸುವದನ್ನು ಯಾರು ಬಲ್ಲರು ಬಂದದನ್ನು ಅನುಭವಿಸಲೇಬೇಕು. ಹಸ್ತಿನಾಪುರದ ಧರ್ಮರಾಜನು ಧರ್ಮಕ್ಕಾಗಿ ಜೀವಿಸಿದ್ದನು. ಧರ್ಮಕ್ಕಾಗಿಯೇ ನಡೆಯುತ್ತಿದ್ದನು. ಪಗಡೆಯಾಟದಲ್ಲಿ ಸೋತು ಸೋಲನ್ನು ಒಪ್ಪಿಕೊಳ್ಳುವುದು ಒಂದು ಧರ್ಮವೇ, ಆ ಧರ್ಮ ಪರಿಪಾಲಿಸಲು ಹನ್ನೆರಡು ವರ್ಷ ಅರಣ್ಯದ ವಾಸ ಅನುಭವಿಸಬೇಕಾಯಿತು.

"ಇನ್ನೇನು ಹೇಳಲಿ ಮಾನವ ಜನ್ಮದಲಿ ಗುರುದೊರೆತು

ಜ್ಞಾನಭಕ್ತಿ ತಿಳಿಸಿ ನಿತ್ಯಧ್ಯಾನದೊಳು ನಿಧಾನವಿಡಸಿದ

ಜ್ಞಾನ ಮೂರುತಿ ಕರಿಘೂಳೀಶನ

ಧ್ಯಾನದೊಳು ಸುಜ್ಞಾನವಾಯ್ತು"[೩೭]

ಭಕ್ತ ಮಾರ್ಕಂಡೇಯ, ಸತ್ಯ ಹರಿಶ್ಚಂದ್ರ, ಧರ್ಮರಾಜ ಇಂಥ ಮಹಾತ್ಮರೇ ಜೀವನದಲ್ಲಿ ಬಂದದ್ದನ್ನು ಅನುಭವಿಸಿದ್ದಾರೆ. ಸಾಮಾನ್ಯರಾದ ನಾವು ಗುರುವಿನ ಅಕ್ಕರೆಯಿಂದ ಬಂದದ್ದನ್ನು ಸರಿಯಾಗಿ ಎದುರಿಸಿ ಗೆಲ್ಲಬೇಕು.

### ೧.೧೧ ಸಾವು

ವೃಷಾದಿಯೋನಿಯಲ್ಲಿ ೨೪ ಲಕ್ಷ, ಅಂಡಜಸ್ವೇದಜಯೋನಿ ಹತ್ತು ಲಕ್ಷ, ಕ್ರಿಮಿಯೋಗಿ ಹನ್ನೊಂದು ಲಕ್ಷ, ಜಗಜಯೋನಿ ಹನ್ನೊಂದು ಲಕ್ಷ, ಜಗಯೋನಿ ಒಂಬತ್ತು ಲಕ್ಷ, ಪಶ್ವಾದಿ ಯೋನಿ ಮುವತ್ತು ಲಕ್ಷ, ಮನುಷ್ಯಯೋನಿ ನಾಲ್ಕು ಲಕ್ಷ - ಹೀಗೆ ಪ್ರತಿಯೊಂದು ಜೀವಿಯ ಈ ಭೂಮಿಯಲ್ಲಿ ಜನ್ಮವೆತ್ತಿ ಬರುತ್ತದೆ. ಒಟ್ಟು ೮೪ ಲಕ್ಷ ಜೀವಿಗಳು ಜೀವಿಸಲು ಬಂದ ಮೇಲೆ ಪ್ರತಿಯೊಂದು ಸಾವಿನ ಮೂಲಕ ತನ್ನ ಅಂತ್ಯವನ್ನು ಕಂಡುಕೊಳ್ಳುತ್ತದೆ. ಅಂತೆಯೇ ಮನುಷ್ಯನು ಇದಕ್ಕೆ ಹೊರತಾಗಿಲ್ಲ. ಹುಟ್ಟಿದ ಮೇಲೆ ಸಾಯಲೇಬೇಕು. ಆದ್ದರಿಂದ ನಾನು ಈಗ ಸಾಯುತ್ತೇನೆ, ಆಗ ಸಾಯುತ್ತೇನೆ, ಇನ್ನೂ ಒಂದಿಷ್ಟು ದಿನ ಇದ್ದಿದ್ದರೆ, ಎಂದು ಸಾವನ್ನು ಮೋಸಗೊಳಿಸಲು ಪ್ರಯತ್ನಿಸಿದರೂ ಕೊನೆಗೆ ಸಾವು ಗೆಲ್ಲುತ್ತದೆ.

ಮುರುಘೇಂದ್ರ ಸ್ವಾಮಿಗಳು ಸಾಯುವುದನ್ನು ಚಿಂತಿಸುವವರಿಗೆ ಈ ರೀತಿ ಸಮಾಧಾನಪಡಿಸಲೆತ್ನಿಸಿದ್ದಾರೆ.

"ಯಂದಾದರೊಂದಿನ ಸಾಯೋಣ

ಸಾವಿಗೆ ಯಾತಕ ಅಂಜೋಣ"[೩೮]

ನಿಶ್ಚಿತವಾದ ಸಾವಿನಿಂದ ಓಡಿಹೋಗಲು ಆಗುವುದಿಲ್ಲ. ಹುಟ್ಟಿದ ಮೇಲೆ ಸಾಯಲೇಬೇಕು. ಅದಕ್ಕಾಗಿ ವ್ಯಥೆ ಪಡಬಾರದು. ಎಂದಾದರೊಂದು ದಿನ ಸಾಯೋಣ ಸಾವಿಗೆ ಅಂಜಬೇಡ. ಸಾವು ಬರುವುದಕ್ಕಿಂತ

ಮೊದಲು ನೀನು ನಿನ್ನನ್ನೂ ಪರಿಶುದ್ಧಗೊಳಿಸಿಕೊ, ಸಂಸಾರದಲ್ಲಿ ಬಂಧಿತರಾದ ನಾವು ಕಣ್ಣು, ಕಿವಿ, ಮೂಗು, ಬಾಯಿಗಳಂತಹ ನೌರಂಧ್ರಗಳನ್ನು ಒಳ್ಳೆಯ ರೀತಿಯಲ್ಲಿ ಇಟ್ಟುಕೊಳ್ಳಬೇಕು. ನಾನು ನನ್ನದು ಎಂದು ಕುಟುಂಬ, ಸಮಾಜಕ್ಕಾಗಿ ಮೀಸಲಿದ್ದರೆ ಸತ್ತಾಗ ನಮ್ಮ ಜೊತೆ ಯಾರು ಬರುವುದಿಲ್ಲ ಎಂದು ಮುರುಘೇಂದ್ರಸ್ವಾಮಿ ಬೋಧಿಸಿದ್ದಾರೆ.

### ೧.೧೨ ಹೆಣ್ಣು ಮಾಯೆ

"ಯೋನಿಯೊಳಗೆ ಜನನ ಮಾತ್ರ
ಯೋನಿಗೆ ಮೋಹಿಸಿ ಹೊಲಸು ಯೋನಿ
ಮರ್ಮವು ತಿಳಿಯದಲೆ ಮಲಹೀನರಾಗ್ಹೋಗುವ ನರರು"[೫೯]

ಈ ಭೂಮಿಯಲ್ಲಿ ೮೪ ಲಕ್ಷ ಯೋನಿಗಳಿಂದ ಜೀವಿಗಳು ಪ್ರಾಣಿ, ಪಕ್ಷಿ, ಕೀಟ, ಮನುಷ್ಯ ಇತ್ಯಾದಿ  ಹುಟ್ಟಿ ಬಂದಿವೆ. ನಾವು ಮನುಷ್ಯರು ಯೋನಿಯಲ್ಲಿಯೇ ಹುಟ್ಟು ಪಡೆದವರು. ಅವರು ಯೌವನದಲ್ಲಿ ಮನುಷ್ಯ ಹಾದಿ ಬಿಟ್ಟ ನಡೆದುಕೊಳ್ಳುತ್ತಾನೆ. ಹೆಣ್ಣೆಂದರೆ ಅವನಿಗೆ ಕೇವಲ ಭೋಗದ ವಸ್ತುವಾಗಿ ಕಂಡು ಬರುತ್ತದೆ. ಅಂತವರನ್ನು ಮುರುಘೇಂದ್ರ ಸ್ವಾಮಿಗಳು ಹೀಗೆ ಕೇಳಿದ್ದಾರೆ. ಗುಂಡಾದ ಪೊಲೆಯ ಮಾಂಸದುಂಡೆಯನ್ನು, ನೀಳವಾದ ಗುಂಗುರುಳ ಮುಡಿಯನ್ನು ಹಂದರಕಟ್ಟಿರುವ ಅಸ್ಥಿಪಂಜರವನ್ನು, ಮುಸಿಕಿರುವ ಹಸಿ ಚರ್ಮವನ್ನು, ಹಲವೆಡೆ ಹಬ್ಬಿರುವ ನರನಾಡಿಯನ್ನು ಒಂದೊಂದಾಗಿ ಹುಡುಕಿನೋಡು ನೀ ಬಯಸುವ ಹೆಣ್ಣಿನಲ್ಲಿ ಲವಲೇಶವಾದರೂ ಲೇಸಿದೆಯೆ ಇಂದ್ರಿಯಗಳಲ್ಲಿ ಇಳಿ ಸುರಿಯುವ ಮಲವನ್ನು, ಕಂಡುಕೆಂಪಾಗಿ ಸೋರುವ ಮುಟ್ಟನ್ನು, ಅವಳ ಹರೆಯ ಅಂತ್ಯವಾಗುವ ಪರಿಯನ್ನು, ಚಿತ್ತದ ಕಪಟವನ್ನು ಪರಿಭಾವಿಸಿ ನೋಡು ನೀ ಬಯಸುವ ಹೆಣ್ಣಿನಲ್ಲಿ ಲವಲೇಶವಾದರೂ ಲೇಸಿದೆಯೆ ಹೆಣ್ಣನ್ನು ಪಡೆಯಲು ಪಡುವ ಪಾಡನ್ನು, ಅನುಭವಿಸುವ ಅಲ್ಪಸುಖವನ್ನು, ತುದಿಗಾಗುವ ನೀರಸವನ್ನು ನಿರಾಕರಿಸಲಾರದೆ ಬರಿಯ ರಂಜನೆಯ ರತಿಕೇಳಿಯಾಗಿ ಕೆಡುವ ಈ ದೇಹವನ್ನು ಮತ್ತಷ್ಟು ಬೇಗ ಕೆಡಿಸಿಕೊಂಡು ದೇವರನ್ನು ಮರೆಯಬೇಡವೋ ಎಲೆ  ಮನುಜ ನೀ ಬಯಸುವ ಹೆಣ್ಣಿನಲ್ಲಿ ಸುಖವಿಲ್ಲ.

ಹೆಣ್ಣು ಮಾಯೆ ಎಂಬುದು ಎಲ್ಲರೂ ಹೇಳುತ್ತಾ ಬಂದರು. ಆದರೂ ಅದನ್ನು ತಿಳಿಯದವರೆಷ್ಟೋ, ಕಾಮಕಲೆಗನುಸಾರ ಕೂಡಿ ಬಯಸಿದ್ಧಿಚ್ಛೆಯನ್ನೆಲ್ಲ ಸಲಿಸೆ ಚೆಲುವನೊಬ್ಬನು ಎಡೆಬಿಡದೆ ಒಡಗೂಡಿದ್ದರೂ ಅವನೊಬ್ಬ ನೋಡಲಾಡಲು ಹಂಬಲಿಸುವಳು. ಹೆಣ್ಣುಗಳ ಪ್ರೇಮ ಎಂದು ಶಾಶ್ವತವಲ್ಲ. ಸಿಹಿಯಾದ ಮಾತು, ಸೊಗಸಾದ ತಿಳುವಳಿಕೆ, ಅನುಕೂಲ ವರ್ತನೆಯಿಂದ ಅಭಿನವ ರೂಪ ಯೌವನದ ಜುಮ್ಮ ತೋರಿ ತವಕಗೊಂಡು ಪ್ರೀತಿಸಿದರೂ ಅವನನ್ನು ತ್ಯಜಿಸುವಳು ಇನ್ನೊಬ್ಬನಿಗೆ ಆಶೆಪಟ್ಟು. ಹೆಣ್ಣುಗಳ ಪ್ರೇಮ ಎಂದು ಶಾಶ್ವತವಲ್ಲ ಆದ್ದರಿಂದ ನೀನು ಈ ಹೆಣ್ಣು ಯೋನಿ ಎಂಬ ಮಾಯೆಯನ್ನು ಮೋಹಿಸಿದರು ಒಂದು ವೇಳೆ ತಂಗಾಳಿ, ಕಾಮನಬಿಲ್ಲು ಕನಸು, ನೀರಿನ ಮೇಲೆ ಬರೆದಕ್ಷರ,

ಕೋರೈಸುವ ಕುಡಿಮಿಂಚು ಇವನ್ನಾದರೂ ಒಮ್ಮೆ ನಿಜವೆನ್ನಬಹುದು ಹೆಣ್ಣುಗಳ ಪ್ರೇಮ ಶುದ್ಧ ಸುಳ್ಳು ಎಂದು ಈ ಮೋಹದ ಬಲೆಗೆ ಬೀಳುವವರನ್ನು ಎಚ್ಚರಿಸಿದ್ದಾರೆ.

೧.೧೩ ಸ್ಥಿರವಿಲ್ಲ

"ಧರೆಯೊಳು ಸ್ಥಿರವೇನಿಕಾಯ
ಅರಘುಳಿಗೆಯಲಾಗೋದ ನ್ಯಾಯ
ಧರೆಯೊಳು ಸ್ಥಿರವೆ ನೀರಗುರುಳಿಯಿದು
ಮರುಳಿ ಕನಸಲಿ ಶಿರಿಕಂಡ ಪರಿಯಾ"[೪೦]

ಈ ಭೂಮಿ ಮೇಲೆ ಯಾವುದು ಸ್ಥಿರವಿಲ್ಲವೆಂದ ಬಳಿಕ ಈ ದೇಹವು ಸ್ಥಿರವಾದುದಲ್ಲ. ಮನುಷ್ಯನಾಗಿ ಹುಟ್ಟಿದ ಮೇಲೆ ನಮ್ಮ ನಮ್ಮ ಕಾಯಕವನ್ನು ನಾವು ಮಾಡಲೇಬೇಕು. ನಾವು ಯಾವಾಗ ಹುಟ್ಟುತ್ತೇವೆ ಯಾವಾಗ ಸಾಯುತ್ತೇವೆ ಎಂಬುದನ್ನು ಗೊತ್ತಿಲ್ಲದ ನಾವು ನೀರ ಮೇಲಿನ ಗುಳ್ಳೆಯಂತಿರುವ ಸುಖಗಳನ್ನು ಪಡೆಯಲು ಒದ್ದಾಡುತ್ತೇವೆ. ನಮಗಿಂತಲೂ ಏನು ಇಲ್ಲದ ನಿರ್ಗತಿಕರಷ್ಟೆ ವಾಸಿ, ಅವರು ಕನಸುಗಳಲ್ಲಿಯೇ ತಮ್ಮ ಇಷ್ಟಗಳನ್ನು ಪೂರೈಸಿಕೊಳ್ಳುತ್ತಾರೆ. ಆದರೆ ಇದ್ದವರು ಇನ್ನಷ್ಟು, ಮತ್ತಷ್ಟು ಎಂಬ ದುರಾಸೆಯಿಂದಲೇ ಜೀವನ ಕಳೆಯುತ್ತಿರುತ್ತಾರೆ.

"ಆಗಯೀಗ ಯಾವಾಗೇನೊ
ನಿನಗೋಗದು ತಿಳದಿಲ್ಲನ್ನು
ಯಾವಾಗಾದರೇನ್ಹೋಗದು ತಪ್ಪದು
ಬೇಗದಿಂದ ಶಿವಯೋಗಿಯಾಗು"[೪೧]

ಮೇಲೆ ಹೇಳಿದ ಹಾಗೇ ಹುಟ್ಟಿದ ಪ್ರತಿಯೊಂದು ಜೀವಿಯು ಸಾಯಲೇಬೇಕು. ಇದು ಪ್ರಕೃತಿ ನಿಯಮ. ನಾನು ಸಾಯುವುದೆ ಇಲ್ಲ ಅಮರನಾಗಿ ಇರುವೆ ಎಂದರೆ ಅದು ಸಾಧ್ಯವಿಲ್ಲ. ಸಾವು ಈ ದಿನ, ಈ ಸಮಯ ಎಂದು ಹೇಳಿ ಬರುತ್ತಿದ್ದರೆ ಮನುಷ್ಯ ಅದು ಬರುವುದಕ್ಕೂ ಮುಂಚೆಯ ಎಲ್ಲ ಭೋಗಗಳನ್ನು ಭೋಗಿಸುತ್ತದೆ. ಅದು ಆಗುವುದಿಲ್ಲವೆಂದ ಬಳಿಕ ಸಾವು ಸಾವು ಎನ್ನದೇ ಸಾವು ಬರುವುದಕ್ಕಿಂತ ಮೊದಲು ಪರಿಪೂರ್ಣ ಜೀವನ ನಡೆಸಬೇಕು. ಸಾವನ್ನು ಮೋಸಗೊಳಿಸಲು ಆಗದು. ಅದರಿಂದ ಇರುವ ಕೆಲವು ದಿನಗಳು ಶಿವಯೋಗಿಯಾಗಿ ಬಾಳಬೇಕು.

"ಅಳಿದು ಬಿಡೊ ದುರ್ಗಣವ
ಸದಾ ಕೇಳು ನಾದ ಕೊನಿಘನವ
ಮೇಲು ಸದ್ಗರುವಿನ

ಕೀಲು ತಿಳಿಯದಲೆ

ಕಾಲವು ಸುಮ್ಮನೆ ಕಳೆಯುವದೇನೋ

ಶಾಂತಮನವು ಸ್ಥಿರಗೊಳಿಸಿ

ವೇದಾಂತ ವಿಚಾರವ ನಡಿಸಿ

ಅಂತರಂಗದಿರೊ ಅಂತರಾತ್ಮನ ಪಾದಂತುಭಜಿಸೊ ನಿರಂತರದಿರುವಾ

ಸುಖದುಃಖೆಂಬವು ಎರಡು

ಯಾವ ಕಾಲದಿಯಿರುವವು ಜೋಡು

ಸುಖದುಃಖ ಯರಡು ಸ್ಥಿರವಿಲ್ಲ ನೋಡೊ

ಶ್ರೀ ಕರಿಘೂಳೇಯ ಪಾದದೊಳಾಡೊ"[೨]

ಧರ್ಮಮೂರ್ತಿಯಾದ ಮುರುಘೇಂದ್ರಸ್ವಾಮಿ ಸುಜ್ಞಾನ ಸವಿಯನ್ನು ಎಲ್ಲ ಜನರಿಗೆ ಆತ್ಮೀಯತೆಯಿಂದ ಹಾಡುತ್ತಲಿದ್ದರು. ಅಣ್ಣತಮ್ಮಂದಿರೇ ಹುಚ್ಚು ಮೋಹದಿಂದ ಮಡದಿ ಮಕ್ಕಳು ಮನೆ ಸಂಪತ್ತು ಮೊದಲಾದ ಸುಖದ ವ್ಯಾಮೋಹವನ್ನು ತೋರುವ ಸಂಸಾರದೊಳಗೆ ಮುಳುಗಿಬಿಟ್ಟ ನಾನು ನನ್ನದು ಎಂಬ ವ್ಯರ್ಥ ಅಭಿಮಾನದಿಂದ ಅಸತ್ಯ ಅನಾಚಾರಗಳಿಗೂ ಭಯಪಡದೆ ಮಾನವತೆಯ ಮೌಲ್ಯವನ್ನು ವ್ಯರ್ಥಗೊಳಿಸಬೇಡಿರಿ. ನಿಮ್ಮ ಸುಖಸೌಭಾಗ್ಯಗಳನ್ನು ಕರುಣಿಸಿರುವ ಭಗವಂತನನ್ನು ಮರೆತು ಗರ್ವಪಟ್ಟು ಪಶುವಿನಂತೆ ನಡೆದರೆ ಶಿವನ ಪೆಟ್ಟ ತಪ್ಪಿಸಿಕೊಳ್ಳಲಾದೀತೆ ಜಗದೀಶ್ವರನು ನಿನಗೆ ಶ್ರೇಷ್ಠ ನರ ಜನ್ಮ ಕೊಟ್ಟು ಅದಕ್ಕೆ ಅನುಕೂಲವಾದ ಸುಂದರ ಅಂಗೋಪಾಂಗಗಳೆಲ್ಲವನ್ನು ಕೊಟ್ಟು ಸತ್ಸಾಧನೆಯ ಶೂರನಾಗಿ ಬದುಕೆಂದು ಅನುಗ್ರಹಿಸಿದರು. ಅದೆಲ್ಲವನ್ನು ದುರುಪಯೋಗ ಪಡಿಸಿಕೊಂಡು ಅನೇಕ ವಿಪತ್ತುಗಳಿಗೊಳಗಾಗುವುದು ನಿನ್ನ ಮೂರ್ಖತನದ ಪರಮಾಧಿಯಲ್ಲವೆ, ನಮಗೆ ನಿಜವಾದ ಸಂಪತ್ತನ್ನು ಕೊಟ್ಟು ರಕ್ಷಿಸುವ ತಂದೆಯನ್ನೇ ಮರೆತು ಗಾಳಿಯಲ್ಲಿ ಹಚ್ಚಿಟ್ಟ ದೀಪದಂತೆ ಅಶಾಶ್ವತವಾದ ಅನೇಕ ಸುಖಗಳಿಗೆ ಮಾರುಹೋಗಿ ಮರುಳರಾಗಬಾರದು. ನಮ್ಮ ಶರೀರವನ್ನು ಮಲಿನಗೊಳಿಸದೆ ಸಾಧನಸಂಪತ್ತನ್ನಾಗಿ ಮಾಡಿಕೊಂಡು ಮಹಾದೇವನ ಮುಡಿಗೇರಿಸುವ ಪವಿತ್ರ ಸುಗಂಧ ಪುಷ್ಪದಂತೆ ಭಕ್ತಿಯ ಪರಿಮಳ ವೃದ್ಧಿಪಡಿಸಿಕೊಂಡಾಗಲೇ ನಾವು ನಮ್ಮ ಇಷ್ಟಲಿಂಗನಲ್ಲಿರುವ ಆನಂದಮಯ ಸ್ವರೂಪವನ್ನು ಕಂಡು ನಮಗೆ ಶುಭಹೊತ್ತು ತರುವ ಸುಖದಿನಗಳನ್ನು ಕಾಣಲು ಸಾಧ್ಯವಾಗುತ್ತದೆ. ನಾವು ಲೋಕದ ಗೌರವಕ್ಕೆ ಅರ್ಹರಾಗುತ್ತೇವೆ. ಆಗ ಶಿವನ ಕೃಪೆ ನಮ್ಮದಾಗುತ್ತದೆ. ಹೀಗೆ ಜನವಂದ್ಯರಾದ ಶರಣರು ಹಿತವಚನಗಳಿಂದ ಎಲ್ಲರನ್ನು ರಕ್ಷಿಸುತ್ತಿದ್ದರು. ಶುಭಾಶುಭಗಳ ಸೂಚನೆಗಳನ್ನು ಕೊಟ್ಟು ಸುಖದುಃಖಗಳೆರಡೂ ನಮ್ಮನ್ನು ಅಂಟಿಕೊಂಡೇ ಇರುತ್ತವೆ. ನಾವು ಬರುವಾಗಲೇ ಮೃತ್ಯುವಿನ ಭೇಟಿಯನ್ನು ಕೈಲಿ ಹಿಡಿದೇ ಬಂದಿದ್ದೇವೆ. ಜೀವನ ಯಾತ್ರೆ ಯಾವಾಗ ಕೊನೆಗೊಳ್ಳುತ್ತದೆಂದು ಹೇಳಲಾಗುವುದಿಲ್ಲ, ಎಚ್ಚರಿಕೆ ಎಂದು ಮುಂದಿನ

ಸಾಧನೆಗೆ ಬೆನ್ನು ತಟ್ಟಿ ಎಬ್ಬಿಸುವ ಹಿತಚಿಂತಕರಾಗಿ ಬಾಳಿಗೆ ಬೆಳಕನ್ನು ಕೊಡುವ ಮಹಾನ್ ವ್ಯಕ್ತಿಗಳಾಗಿದ್ದರು. ಮುರುಘೇಂದ್ರರು ಇದು ನನ್ನದು, ಇದು ಪರರದು ಎಂಬ ಭಾವವಿಲ್ಲದಿದ್ದುದರಿಂದ ಅಷ್ಟು ಸ್ವಚ್ಛವಾದ ಅಂತಃಕರಣದ ಕೊಡುಗೆ ಅವರಿಂದ ಜನರಿಗೆ ದೊರಕುತ್ತಿತ್ತು.

ಇಂದಿನ ಸಂದರ್ಭದಲ್ಲಿ ಪ್ರತಿಯೊಬ್ಬರು ಸ್ವಾರ್ಥತೆ, ತನ್ನ ಲಾಭಕ್ಕಾಗಿ ಏನೆಲ್ಲಾ ಮಾಡಲು ಮುಖವಾಡದ ಮೇಲೊಂದು ಮುಖವಾಡ ಧರಿಸುತ್ತಾರೆ. ಸತ್ಯವಾಗಿಯು ಅಂತವರ ನಿಜ ಸ್ವರೂಪ ದೇವರಿಗೂ ಗುರುತಿಸಲು ಅಸಾಧ್ಯ. ಅಂದ ಬಳಿಕ ನಾವು ಯಾವ ರೀತಿ ನಂಬುವುದು ಅವರನ್ನು

"ಬಾಯಿಲಿಂದ ನುಡಿವರು ಬ್ರಹ್ಮಜ್ಞಾನ

ಅವರು ಕೈಲಿಂದ ಮಾಡುವರು ಗುಡುಮತನಾ

ದೇಹದಿಂದ ನಡಿವರು ಕೆಮ್ಮತಾನಾ

ಇವರು ಸಾಯತಾನ ಕಾಣುವುದಿಲ್ಲ ಆತ್ಮನ ಕೂನಾ"[೪೩]

ಬಾಯಿಯಿಂದ ಒಳ್ಳೆಯದನ್ನೇ ನುಡಿಯುವರು ಅವರು ಜೀವಿಸಿರುವುದೇ ಜನರಿಗಾಗಿ ಎಂದು ಜನರನ್ನು ನಂಬಿಸಿ, ಆ ನಂಬಿಕೆಯಿಂದಲೇ ಅವರನ್ನು ಕೊಳ್ಳೆ ಹೊಡೆಯುತ್ತಾರೆ. ಅವರು ಮಾಡುವ ಕೆಟ್ಟ ಕಾರ್ಯಗಳು ಇನ್ನೊಂದು ಕೈಗೂ ಗೊತ್ತಾಗುವುದಿಲ್ಲ. ಹೀಗೆ ಮಾಡುವುದರಲ್ಲಿ ಇವರು ಅನುಭವಸ್ಥರಾಗಿರುತ್ತಾರೆ. ಜೀವನದಲ್ಲಿ ಒಮ್ಮೆಯೂ ಅಂತರಾಳದಿಂದ ಒಳ್ಳೆಯ ಕೆಲಸ ಮಾಡದ ಇವರು ಜೀವನದ ಕೊನೆಯ ಪಯಣದಲ್ಲಿ ರೋಗರುಜಿನಗಳಿಂದ ಸಾಯುತ್ತಾರೆ. ಹೀಗೆ ಸ್ಥಿರವಲ್ಲದ ಮನುಷ್ಯ ಜನ್ಮ ತಾನು ಹುಟ್ಟಿ ಸಾಯುವವರೆಗೆ ಮಾಡಬೇಕಾದ ಕರ್ತವ್ಯಗಳ ಬಗ್ಗೆ ಹಾಗೂ ಮಾನವೀಯ ಮೌಲ್ಯಗಳೇನು, ಇರುವಷ್ಟು ದಿನಗಳು ಜನ್ಮವನ್ನು ಹೇಗೆ ಸಾರ್ಥಕಪಡಿಸಿಕೊಳ್ಳಬೇಕು ಎಂಬ ನೀತಿಯನ್ನು ವಾಸ್ತವಿಕ ನೆಲೆಗಟ್ಟಿನಲ್ಲಿ ನಿಂತು ಮುರುಘೇಂದ್ರಸ್ವಾಮಿಗಳು ಅನುಭವದ ಹಿನ್ನೆಲೆಯಲ್ಲಿ ಜನರ ಮುಂದಿಡುತ್ತಾರೆ.

**೧.೧೪ ವೃಥಾ ಚಿಂತೆಯಿಂದ ಫಲವಿಲ್ಲ**

"ಮಾಡಬ್ಯಾಡಲೊ ಕಾಲಿ ಚಿಂತಿ,

ಬಿಡು ಮಾಯಾದ ಬ್ರಾಂತಿ

ಜಡ ದೃಶ್ಯಶರೀರವು ದೃಢವೆಂದು ತಿಳಿತಿ

ಜಡಿದೆನು ಹೊಡಿಯುವ ಮನಮಾಡೊ ಶಾಂತಿ"[೪೪]

ಮನುಷ್ಯನ ದೇಹ ನಾಲ್ಕು ಧಾತುಗಳಿಂದ ನಿರ್ಮಿತವಾಗಿದೆ. ಸತ್ತಾಗ ಅವನೊಳಗಿನ ಪೃಥ್ವಿಯು ಪೃಥ್ವಿಗೆ ಒಂದಿರುಗಿ ಸೇರುತ್ತದೆ. ದ್ರವ್ಯಗಳು ನೀರನ್ನು ಸೇರುತ್ತವೆ. ಚೈತನ್ಯವು ಆಕಾಶವನ್ನು ಸೇರುತ್ತದೆ. ವಾಯುವು

ಗಾಳಿಯನ್ನು ಸೇರುತ್ತದೆ. ಹೀಗಿರುವಾಗ ಸ್ಥಿರವಿಲ್ಲದ ಈ ದೇಹ ನಶಿಸುವಾಗ ಸಾಯುತ್ತೇನೆಂದು ಚಿಂತಿಸುವ ಭ್ರಾಂತಿಯಿಂದ ಕೂಡಿರುತ್ತದೆ ಜೀವ.

ಈ ಮಾಯದ ಬದುಕಿನ ಮೋಹ ಬಿಟ್ಟು ಒಳ್ಳೆಯ ಮನಸ್ಸಿನಿಂದ ಬದುಕಲು ಪ್ರಯತ್ನಿಸಬೇಕು ಎನ್ನುವಲ್ಲಿ ಕವಿಯು "ಮೂರು ದಿನದ ಬಜಾರ ನಾರಿಸುತರ ಸಂಸಾರ". ಎಂದರೆ ಜೀವಿತದ ಕಾಲದಲ್ಲಿ ಮನುಷ್ಯ ಹೆಂಡತಿ, ಮಕ್ಕಳು ಎಂಬ ಮೋಹದ ಬಲೆಯಲ್ಲಿ ಸಿಲುಕಿ ಒದ್ದಾಡುತ್ತಾನೆ. ಅವನು ಜೀವನವಿಡಿ ಬರಿ ಹೊನ್ನು- ಹೆಣ್ಣು-ಮಣ್ಣು ಇವುಗಳಿಗಾಗಿಯೇ ಬದುಕಿ ವ್ಯರ್ಥ, ಜೀವನ ಹಾಳು ಮಾಡಿಕೊಳ್ಳುತ್ತಾನೆ. ದಾಸರ ವಾಣಿಯಂತೆ ಬರುವಾಗ ಬೆತ್ತಲೆ ಹೋಗುವಾಗ ಬೆತ್ತಲೆ ನಡುವೆ ಬರೀ ಕತ್ತಲೆ ಎಂಬ ಮಾರ್ಮಿಕವಾದ ವಾಣಿಯಂತೆ. ಮಾನವ ಹುಟ್ಟುವಾಗ ಹೇಗೆ ಬರುವನೋ ಸಾಯುವಾಗಲೂ ಹಾಗೆಯೇ ಹೋಗುವನು. ಅದಕ್ಕಾಗಿ ಲೌಕಿಕ ಜೀವನದ ಹಂಗೂ ಬಿಟ್ಟು ಧ್ಯಾನಾಧಿಗಳನ್ನು ಮಾಡಿ ದೇವರ ಕೃಪೆಗೆ ಪಾತ್ರನಾಗಿ ಮೋಕ್ಷದೆಡೆಗೆ ಸಾಗಬೇಕು ಎಂಬುದು ಕವಿಯ ಆಶಯವಾಗಿದೆ.

ಇದ್ದು ಸತ್ತಂತಿರುವ ಮಾನವ ಸತ್ತು ಬದುಕುಳಿಯುವಂತಹ ಕೆಲಸಗಳನ್ನು ಮಾಡಬೇಕೆಂಬುದೇ ಇಲ್ಲಿಯ ಮುಖ್ಯ ತಿರುಳು.

**೧.೧೫ ಸಂಸಾರ ಸಾಗರದಲ್ಲಿ ಮೋಕ್ಷ ಹೇಗೆ ಲಭಿಸುವುದು**

"ಕಾಯರಹಿತ ನಿರ್ಮಾಯ ಪರಿಭವ

ಭಯ ದೂರನಾಗುವದ್ಯಾಂಗಮ್ಮಾ

ಆಯಸಿಲ್ಲದ ಜೀವ ಜಪಿಸುವ ಮಂತ್ರದಿ

ನ್ಯಾಯಾದಿ ಕೂಡಲು ಹೀಂಗಮ್ಮಾ"[೪೫]

ಮಾಡುವ ಕಾಯಕದಲ್ಲಿ ಮಡಿವಂತಿಕೆ ಮಾಡದೆ ಮನುಷ್ಯನಾಗಿ ಹುಟ್ಟಿದ ಮೇಲೆ ಕಾಯಕದಲ್ಲಿ ನಿರತನಾಗಿರಬೇಕು. ಆ ಕಾಯಕ ಚಿಕ್ಕದು-ದೊಡ್ಡದು ಎಂಬ ಬೇಧಭಾವವಿದಲ್ಲದೇ ಕಾಯಕದಲ್ಲಿ ತೊಡಗಬೇಕು. ಕಾಯಕ ಮಾಡದೆ ಹೋದರೆ ಆತ ಮುಕ್ತಿಯನ್ನು ಪಡೆಯಲಾರ. ಕೆಲಸದ ಬದಲಾವಣೆಯೇ ವಿಶ್ರಾಂತಿ ಎನ್ನುವ ಗಾಂಧಿಜೀಯವರ ಮಾತಿನಂತೆ ಕವಿಯು ಆಯಸಿಲ್ಲದೆ ಕೆಲಸ ಮಾಡಬೇಕು ಎಂದಿದ್ದಾನೆ.

ಈ ಜನ್ಮದಲ್ಲಿ ತನ್ನ ಕರ್ತವ್ಯಗಳನ್ನು ಪೂರ್ಣಗೊಳಿಸದೆ ಹೋದರೆ ಮುಂದಿನ ಜನ್ಮದಲ್ಲಿ ಮತ್ತೆ ಮತ್ತೆ Empty Mind is a Devils Workshop ಮನುಷ್ಯನಾಗಿ ಕಾಯಕದಲ್ಲಿ ಮುಂದುವರಿಯ ಬೇಕಾಗುತ್ತದೆ. ಎನ್ನುವಂತೆ ಮನುಷ್ಯ ಕೆಲಸ ಮಾಡಲಾರದೆ ಸಮಯವನ್ನು ಕಳೆಯುವುದರಿಂದ ಮನುಷ್ಯನ ಮನಸ್ಸು ಯೋಗ್ಯವಲ್ಲದ ಯೋಚನೆಗಳನ್ನು ಮಾಡಿ ಅವುಗಳನ್ನು ಈಡೇರಿಸಿಕೊಳ್ಳಲು ಕೆಟ್ಟ ಮಾರ್ಗಗಳನ್ನು ತುಳಿದು ಭವದ ಚಕ್ರದಲ್ಲಿ ಸಿಲುಕಿ ಒದ್ದಾಡುತ್ತಾನೆ ಎಂದು ಹೇಳುತ್ತಾ ಕೆಲಸ ಮಾಡದೆ ಅದರ ಬದಲಾಗಿ

ಮೂರು ಹೊತ್ತು ದೇವರ ಧ್ಯಾನ ಮಾಡುತ್ತಾ ದೇವರ ಮೊರೆ ಹೋದರೆ ನ್ಯಾಯದ ಮಾರ್ಗದಲ್ಲಿ ನಡೆಯದ ನಮಗೆ ದೇವರು ಮೋಕ್ಷ ದೊರಕಿಸಿಕೊಡುವುದಿಲ್ಲ ಎಂದು ಕವಿ ಹೇಳಿದ್ದಾನೆ.

ಒಟ್ಟಿನಲ್ಲಿ ಸಮಾಜ ಜೀವಿಯಾದ ಮನುಷ್ಯ ಸನ್ಮಾರ್ಗದಲ್ಲಿ ಕಾಯಕವನ್ನು ಮಾಡುತ್ತಾ ತಾನು ಬದುಕುವುದರೊಂದಿಗೆ ಸಮಾಜಕ್ಕೆ ತನ್ನದೆಯಾದ ಕೊಡುಗೆ ನೀಡಬೇಕು. ಅಂದಾಗ ಅವನಿಗೆ ಮೋಕ್ಷ ಸಾಧ್ಯ.

**೧.೧೬ ತನ್ನ ಸ್ವ-ಸ್ವರೂಪಾನುಸಂದಾನಗೈಯುವ ತನಕಲು ಸುಖವಿಲ್ಲ**

"ನಿನ್ನ ನೀ ಕಾಣೋತನಕ ಇನ್ನೆಲ್ಲಿಯಿಲ್ಲ ಮುಕ್ತಿ
ಕಣ್ಣಿನೊಳಗ ಹುಣ್ಣಿವಿ ಚಂದ್ರನ ಕಾಣೋ ತನಕ
ಶ್ರವಣ ಮನನನಿಧಿ ಧ್ಯಾಸವುಗೈಯುವ ತನಕ
ಭವ ನೀಗಿಸುವ ಶಿವಯೋಗಿಯಾಗುವ ತನಕ"[೬೬]

'ತನ್ನನ್ನು ತಾನ್ ಅರಿತಡೆ ತನ್ನ ಅರಿವೆ ತನಗೆ ಗುರು' ಎಂಬ ಮಾತಿನಂತೆ. ಬಾಹ್ಯ ಡಂಬಾಚಾರದ ಆಚರಣೆಗಿಂತ ತನ್ನನ್ನು ತಾನು ಅರಿತುಕೊಳ್ಳಬೇಕು. ಆಗಲೇ ಮುಕ್ತಿ ಸಾಧ್ಯ.

'ಆಚಾರವೇ ಸ್ವರ್ಗ, ಅನಾಚಾರವೇ ನರಕ' ಎಂಬ ವಚನಕಾರರ ಮಾತಿನಂತೆ ಒಳ್ಳೆಯವನಾಗಿ ಬಾಳಬೇಕಾದರೆ ತನ್ನ ಪಂಚೇಂದ್ರಿಯಗಳನ್ನು ಸೂಕ್ತ ರೀತಿಯಲ್ಲಿ ಬಳಸಿಕೊಳ್ಳಬೇಕು. ಒಳ್ಳೆಯದನ್ನು ನೋಡುವುದಕ್ಕಾಗಿಯೇ ಕಣ್ಣು ಒಳ್ಳೆಯದನ್ನು ಮಾತನಾಡುವುದಕ್ಕೆ ನಾಲಿಗೆ. ಒಳ್ಳೆಯದನ್ನು ಕೇಳುವುದಕ್ಕೆ ಕಿವಿಯನ್ನು ಹೀಗೆ ಸೂಕ್ತ ರೀತಿಯ ನಮ್ಮ ಪಂಚೇಂದ್ರಿಯಗಳು ಬಳಕೆಯಾದಾಗ ನಮ್ಮ ಜೀವನ ಹೂವಿನ ಹಂದರವಾಗುವುದರಲ್ಲಿ ಸಂದೇಹವಿಲ್ಲ. ಅಲ್ಲದೆ ನಮ್ಮ ಜೀವನದಲ್ಲಿ ಎಡವಿದ್ದೆ ಆದರೆ ಆ ಜೀವನ ಮುಳ್ಳಿನ ಹಾಸಿಗೆಯಾಗುವುದು. ಜೀವನದಲ್ಲಿ ಎಡವಿದಾಗ ಅಡ್ಡದಾರಿ ಹಿಡಿದಾಗ, ನಮಗೆ ಹಿರಿಯರು, ಆತ್ಮೀಯರು ಎಚ್ಚರಿಕೆಗಳನ್ನು ನೀಡಿ ತಿದ್ದಿ ತೀಡಿ ಹೇಳುವರು. ಆಗ ನಾವು ಅವರ ಮಾರ್ಗದರ್ಶನವನ್ನು ಅನುಲಕ್ಷಿಸಿದರೆ ನಮಗೆ ನಷ್ಟವಾಗುವುದರಲ್ಲಿ ಸಂದೇಹವಿಲ್ಲ.

ಮನುಷ್ಯನ ಮನಸ್ಸು ಎರಡೂ ರೀತಿಯಲ್ಲಿ ಪ್ರೇರೇಪಿಸುತ್ತದೆ. ಒಂದು ಮನಸ್ಸು ಒಳ್ಳೆಯದನ್ನು ಪ್ರೇರೇಪಿಸಿದರೆ ಇನ್ನೊಂದು ಮನಸ್ಸು ಕೆಟ್ಟದಕ್ಕೆ ಪ್ರೇರೇಪಿಸುತ್ತದೆ. ನಾವು ಎಷ್ಟೆ ಒಳ್ಳೆತನದಿಂದಲೂ ಮತ್ತು ಸನ್ಮಾರ್ಗಗಳಲ್ಲಿ ನಡೆದರೂ ಕೆಲವೊಮ್ಮೆ ಎಡುವುದು ಸಹಜ. ಹಾಗೆ ಎಡವಿದಾಗ ಆತ್ಮ ವಿಮರ್ಶೆ ಮಾಡಿಕೊಳ್ಳುವ ಅರಿವು ನಮ್ಮಲ್ಲಿರಬೇಕು. ಅಂತರಂಗದ ಅರಿವು ಇದ್ದರೆ ಭವದ ಮೇಲಿನ ಆಸೆಯನ್ನು ಬಿಟ್ಟು ಮೋಕ್ಷವನ್ನು ಪಡೆಬಹುದು ಎಂಬುದನ್ನು ಕವಿಯು ಸೂಚ್ಯವಾಗಿ ಹೇಳಿದ್ದಾನೆ.

**೧.೧೭ ನಿಂದಕರಿಗೆ ಶಿಕ್ಷೆ ನಿಶ್ಚಯ**

"ಹಿಂದಿನ ಶರಣರ ನಿಂದಿಸಿದ ಮಂದಮತಿಗ್ಯಾವ ಬಂಧನ ಹೇಳಯ್ಯಾ
ಯಂದಿಗು ಅಂದದ ದಂದುಗದೊಳ ಮಹಾಂಧ ಹಂದ್ಯಾಗುವ ಹೇಳಯ್ಯ

ಪತಿವ್ರತೆಯರ ವ್ರತ

ಗತಿಗೆಡಿಸಿದ ಘನ ಘಾತಕ ಗ್ರಾಮತ ಹೇಳಯ್ಯ

ಗತಿ ಇಲ್ಲದ ಮಾತಿ ಹಿತ ಹೀನನಾಗುತ ಕೋತಿ ಜಾತ್ಯಾಗುವ ಕೇಳಯ್ಯಾ"[೪೭]

ಒಳ್ಳೆಯವರನ್ನು ಕಂಡು ಹೊಟ್ಟೆಕಿಚ್ಚು ಪಡುವವರು ಸದಾ ಇದ್ದೇ ಇರುತ್ತಾರೆ. ಒಳ್ಳೆಯವರ ಉನ್ನತಿಯನ್ನು ಬಯಸದೇ ಸಮಯ ಸಿಕ್ಕಾಗಲೆಲ್ಲ ತಮ್ಮ ವಿಮರ್ಶೆ ಮಾಡಿಕೊಳ್ಳದೆ ಅಥವಾ ತಮ್ಮ ಲೋಪದೋಷಗಳನ್ನು ನೋಡಿಕೊಳ್ಳದೆ ಇತರರನ್ನು ತೆಗಳುವುದರಲ್ಲಿ ತಲೆ ಕೆಡಿಸಿಕೊಂಡು ಹುಚ್ಚರಾದವರಿಗೆ ಹೇಗೆ ತಿಳಿಹೇಳಬೇಕು. ನಿಂದಕರಿರಬೇಕು ಜಗದೊಳಗ, ಹಂದಿಗಳಿದ್ದ ಹಾಗೆ, ಆಗಲೇ ಸುತ್ತಲಿನ ಪ್ರದೇಶ ಮತ್ತು ಜನ ಸ್ವಚ್ಛರಾಗಿರುವರು. ಅದರಂತೆ ನಮ್ಮ ಸುತ್ತಲು ನಿಂದಕರು ಇರಬೇಕು. ಇದರಿಂದ ನಮಗೆ ಅಧಿಕ ಲಾಭ.

ನಿಂದಕರಿಗೆ ನಮ್ಮ ಮಗ್ಗುಲಲ್ಲಿಯೇ ಜಾಗ ಕೊಡಬೇಕು. ಅವರು ಹತ್ತಿರವಿದ್ದಷ್ಟು ನಾವು ಜಾಗೃತರಾಗಿರುತ್ತೇವೆ. ಮತ್ತು ನಮ್ಮ ಲೋಪದೋಷಗಳನ್ನು ತಿದ್ದಿಕೊಳ್ಳುತ್ತೇವೆ. ಆದರೆ ಇಲ್ಲಿ ಕವಿಯು ನಿಂದಕರಿಗೆ ಶಿಕ್ಷೆಯಾಗುವುದರಲ್ಲಿ ಸಂದೇಹವಿಲ್ಲ ಅವರು ಮುಂದಿನ ಜನ್ಮದಲ್ಲಿ ಹಂದಿ-ಕೋತಿಗಳಾಗಿ ಹುಟ್ಟುವರು ಎಂದಿದ್ದಾನೆ.

### ೧.೧೮ ಜ್ಞಾನಿಯ ಜೊತೆಯಲ್ಲಿ ಅಜ್ಞಾನಿಯಿದ್ದರೂ ಹೀನ ಸ್ಥಿತಿ ಬಿಡುವನೆ

"ಜ್ಞಾನ ಜೋಡಿಲಿ ಮಿಥ್ಯ ಜ್ಞಾನಿಯಿರಲು ತನ್ನ

ಹೀನ ಗುಣವಳಿದು ಪ್ರಜ್ಞಾನಾಗಬಹುದೇ

ಕನ್ನಡಿಯದು ಕಣ್ಣು ಕಾಣದವನಲ್ಲಿರಲು

ತನ್ನ ರೂಪವು ಕಾಣಲುಬಹುದೇ"[೪೮]

ಬೇವಿನ ಮರಕ್ಕೆ ಬೆಲ್ಲದ ಕಟ್ಟೆಯನ್ನು ಕಟ್ಟಿದರೂ ಸಹ ಹೇಗೆ ತನ್ನ ಕಹಿ ಗುಣವನ್ನು ಬಿಡುವುದಿಲ್ಲವೋ ಹಾಗೆ ಜ್ಞಾನಿಯ ಜೊತೆಯಲ್ಲಿ ಅಜ್ಞಾನಿ ಇದ್ದರೂ ಆತ ತನ್ನ ಹೀನ ಸ್ಥಿತಿ ಬಿಡುವುದಿಲ್ಲ.

ಮಾಂಸದ ಮುದ್ದೆಯಾದ ಮಗು ಹುಟ್ಟಿನೊಂದಿಗೆ ಅನೇಕ ಸಂಸ್ಕಾರಗಳನ್ನು ಪಡೆದು ಪ್ರಕೃತಿ ನಿಯಮದಂತೆ ಅನೇಕ ವಿಷಯಗಳನ್ನು ಕಲಿತು ಪರಿಪೂರ್ಣ ಮಾನವನಾಗಲು ಹಲವರು ಹಂಬಲಿಸುವರು. ಜ್ಞಾನ ಅಥವಾ ತಿಳುವಳಿಕೆ ಇರುವವನು ವಿವೇಚಿಸುವ ಸಾಮರ್ಥ್ಯ ಇರುವವನಿಗೆ ಒಳ್ಳೆಯದ್ಯಾವದು ಕೆಟ್ಟದ್ಯಾವುದು ಎಂಬ ಅರಿವಿನಿಂದ ಮತ್ತು ಅನುಭವ ಇರದೇ ಇದ್ದರು ಇತರರನ್ನು ನೋಡಿ ಬದುಕುತ್ತಾನೆ.

ಆದರೆ ಅಜ್ಞಾನಿಗೆ ಇತರರು ಸರಿಯಾಗಿ ಮಾಡಿದ್ದರು. ಅದು ಅವನಿಗೆ ಸರಿ ಕಾಣುವುದಿಲ್ಲ. ಅದಕ್ಕಾಗಿಯೇ ಇಲ್ಲಿ ಕವಿ "ಕುರುಡನಿಗೆ ಕನ್ನಡಿ ಕೊಟ್ಟಾಗ, ನೋಡಲು ಹೇಗೆ ಸಾಧ್ಯವಿಲ್ಲವೋ ಹಾಗೆ ಅಜ್ಞಾನಿಗೆ

ಒಳ್ಳೆಯದನ್ನು ನೋಡಲು ಸಾಧ್ಯವಿಲ್ಲ" ಎಂಬ ಸಾಕ್ಷೇಪ ವಿವರಣೆ ನೀಡಿದ್ದು ಸ್ತುತ್ಯಾರ್ಹವಾಗಿದೆ. ಅವನು ಮಾಡಿದ್ದೇ ಸರಿ, ತಾನು ಆಡಿದ್ದೆ ವೇದವಾಕ್ಯ ಎಂಬ ಅಹಂಭಾವದ ಸ್ವಭಾವ ಹೊಂದಿರುವನು.

ಜ್ಞಾನಿಯಾದವನಿಗೆ ಗರ್ವ ಹತ್ತಿರವು ಸಹ ಸುಳಿಯಲಾರದು ಎಂಬುದೇ ತಿರುಳಾಗಿದೆ.

**ಮಂಗಳಾರತಿ**

ತತ್ವಪದ ಮತ್ತು ಭಜನೆ ಹಾಡುಗಳಲ್ಲಿ ಕಂಡುಬರುವ ವಿಶೇಷತೆ ಎಂದರೆ, ಜನಪದರು ಗುಡಿ-ಗುಂಡಾರಗಳಲ್ಲಿ ಭಜನೆಗಳನ್ನು ಮಾಡಿ ಮನೋರಂಜನೆ ನೀಡುವ ಸಂಪ್ರದಾಯ ಹೊಂದಿರುವರು. ರಾತ್ರಿಯಿಡೀ ಭಜನೆ ಪದಗಳನ್ನು ಹಾಡಿ ಕೊನೆಗೆ ಮಂಗಳಾರತಿ ಪದ ಹಾಡುವರು ಇದು ಸಂಪ್ರದಾಯ ಕೂಡ. ಆರಂಭದಲ್ಲಿ ಗಣಪತಿಯ ಸ್ತೋತ್ರದಿಂದ ಭಜನೆ ಪ್ರಾರಂಭವಾದರೆ, ಮುಗಿಸುವ ಮುನ್ನ ಮಂಗಳಾರತಿ ಹಾಡುವರು. ತಾವು ಮಾಡಿದ ತಪ್ಪುಗಳನ್ನೆಲ್ಲ ಕ್ಷಮಿಸೆಂದು ಈ ಮೂಲಕ ಪ್ರಾರ್ಥಿಸಿಕೊಂಡು ಎಲ್ಲರ ಜೀವನದಲ್ಲಿ ಮಂಗಳವನ್ನುಂಟು ಮಾಡುವಂತೆ ದೇವರಿಗೆ ಮೊರೆ ಹೋಗುತ್ತಾರೆ. ಇಂತಹ ಮಂಗಳಾರತಿ ಪದಗಳು ತಲತಲಾಂತರದಿಂದ ಬೆಳೆದು ಬಂದಿವೆ. ಹಿಂದೆ ಬರವಣಿಗೆ ಇಲ್ಲದ್ದರಿಂದ ಇವು ಪ್ರಮುಖವಾಗಿ ಜನಪದರಲ್ಲಿ ನಾಲಿಗೆಯಿಂದ ನಾಲಿಗೆಗೆ ಹರಿದುಬಂದಿವೆ.

"ಆರುತಿ ಎತ್ತಿರೆ ಮಾರಮರ್ಧನಿಗೆ
ಗೌರಿವರಗೆ ಶಿರ ಗಂಗಾಧರನಿಗೆ"[೪೯]

ಮಂಗಳಾರುತಿ ಮಾಡುವ ದೇವರ ಗುಣಗಳನ್ನು ಹೊಗಳುತ್ತಾ ಅದಕ್ಕೆ ಹಾಡಿನ ರೂಪ ನೀಡಿ ಆರುತಿ ಹಿಡಿದು ಬೆಳಗುತ್ತಾ ದೇವರಿಗೆ ಸಲ್ಲಿಸುವ ಸೇವೆಯೇ ಮಂಗಳಾರುತಿ ಎನ್ನಬಹುದು.

"ಆರುತಿ ಬೆಳಗಿರಿ ನಾರಿಯರೆಲ್ಲರು
ಗೌರಿ ಸುಂದರ ಸುಕುಮಾರ ಜನಕಗೆ
ಗೋಪಿಯರೆಲ್ಲರು ಆಪತ್ತಿನೊಳಗಿರೆ
ಕಾಪಾಡಿದ ಶ್ರೀ ಗೋಪಾಲನಿಗೆ"[೫೦]

ಜ್ಯೋತಿ (ಆರತಿ) ಜ್ಞಾನದ ಸಂಕೇತ ಭಾರತೀಯ ಸಂಪ್ರದಾಯದಲ್ಲಿ ಶುಭಕಾರ್ಯವು ಆರತಿ ಬೆಳಗುವುದರೊಂದಿಗೆ ಆರಂಭಗೊಳ್ಳುವುದು ಒಂದು ವಾಡಿಕೆ. ಅದೇ ರೀತಿ ದಿನ ನಿತ್ಯ ದೇವರ ಪೂಜೆ-ಪುನಸ್ಕಾರಗಳಲ್ಲಿ ಆರತಿ ಬೆಳಗುವುದರೊಂದಿಗೆ ತಮ್ಮ ಭಕ್ತಿಯನ್ನು ದೇವರಿಗೆ ಅರ್ಪಿಸುವರು. ಎಲ್ಲರಿಂದಲೂ ಪೂಜಿಸಲ್ಪಡುವ ಶ್ರೀಕೃಷ್ಣನು ಜಗತ್ತಿಗೆ ಬೆಳಕನ್ನು ನೀಡುವ ಜನಕನಿಗೆ ಆರತಿಯಿಂದ ಬೆಳಗಿ. ಆರತಿ ನಮ್ಮ ಹೃದಯದಲ್ಲಿರುವ ಕತ್ತಲೆಯನ್ನು ಹೋಗಲಾಡಿಸುವ ಸಂಕೇತವಾಗಿ ಕಂಡುಬರುತ್ತದೆ.

ಅಡಿ ಟಿಪ್ಪಣಿಗಳು

೧. ಕನ್ನಡ ಸಂತರ ಪಾರಮಾರ್ಥಿಕ ಪಥ, ಪು.೫೪

೨. ಶರಣ ಸಂಗಮ, ಪು.೩೮

೩. ತತ್ವಪದ ಸಾಹಿತ್ಯ, ಪು.೧೩

೪. ದೇಶೀ ದೃಷ್ಟಿ, ಪು.೫೨

೫. ಜ್ಞಾನಪ್ರದೀಪಿಕಾ, ಪು.೬

೬. ಕ್ಷೇತ್ರಕಾರ್ಯ ಸಂಗ್ರಹ

೭. ಕ್ಷೇತ್ರಕಾರ್ಯ ಸಂಗ್ರಹ

೮. ನಿಜಾನಂದ ಕೈವಲ್ಯ, ಪು.೫೦

೯. ನಿಜಾನಂದ ಕೈವಲ್ಯ, ಪು.೩೮

೧೦. ನಿಜಾನಂದ ಕೈವಲ್ಯ, ಪು.೫೧

೧೧. ನಿಜಾನಂದ ಕೈವಲ್ಯ, ಪು.೬೨

೧೨. ನಿಜಾನಂದ ಕೈವಲ್ಯ, ಪು.೩೮

೧೩. ನಿಜಾನಂದ ಕೈವಲ್ಯ, ಪು.೩೮

೧೪. ನಿಜಾನಂದ ಕೈವಲ್ಯ, ಪು.೫೪

೧೫. ನಿಜಾನಂದ ಕೈವಲ್ಯ, ಪು.೬೧

೧೬. ನಿಜಾನಂದ ಕೈವಲ್ಯ, ಪು.೬೪

೧೭. M.Shivakumarswamy-Jagadguru Renuka Gita (1968)

೧೮. ನಿಜಾನಂದ ಕೈವಲ್ಯ, ಪು.೩೮

೧೯. ದೇಶೀ ದರ್ಶನ, ಪು.೪೩

೨೦. ನಿಜಾನಂದ ಕೈವಲ್ಯ, ಪು.೧೧

೨೧. ನಿಜಾನಂದ ಕೈವಲ್ಯ, ಪು.೧೧

೨೨. ನಿಜಾನಂದ ಕೈವಲ್ಯ, ಪು.೩೩

೨೩. ನಿಜಾನಂದ ಕೈವಲ್ಯ, ಪು.೫೪

೨೪. ನಿಜಾನಂದ ಕೈವಲ್ಯ, ಪು.೬೩

೨೫. ನಿಜಾನಂದ ಕೈವಲ್ಯ, ಪು.೬೩

೨೬. ಕ್ಷೇತ್ರಕಾರ್ಯ ಸಂಗ್ರಹ

೨೭. ಕ್ಷೇತ್ರಕಾರ್ಯ ಸಂಗ್ರಹ

೨೮. ನಿಜಾನಂದ ಕೈವಲ್ಯ, ಪು.೩೪

೨೯. ಜ್ಞಾನಪ್ರದೀಪಿಕಾ, ಪು.೪೩

೩೦. ನಿಜಾನಂದ ಕೈವಲ್ಯ, ಪು.೪೫

೩೧. ಕ್ಷೇತ್ರಕಾರ್ಯ ಸಂಗ್ರಹ

೩೨. ನಿಜಾನಂದ ಕೈವಲ್ಯ, ಪು.೪೫

೩೩. ನಿಜಾನಂದ ಕೈವಲ್ಯ, ಪು.೩೮

೩೪. ಕ್ಷೇತ್ರಕಾರ್ಯ ಸಂಗ್ರಹ

೩೫. ಕ್ಷೇತ್ರಕಾರ್ಯ ಸಂಗ್ರಹ

೩೬. ಕ್ಷೇತ್ರಕಾರ್ಯ ಸಂಗ್ರಹ

೩೭. ಕ್ಷೇತ್ರಕಾರ್ಯ ಸಂಗ್ರಹ

೩೮. ಕ್ಷೇತ್ರಕಾರ್ಯ ಸಂಗ್ರಹ

೩೯. ಜ್ಞಾನಪ್ರದೀಪಿಕಾ, ಪು.೬೭

೪೦. ನಿಜಾನಂದ ಕೈವಲ್ಯ, ಪು.೪೨

೪೧. ನಿಜಾನಂದ ಕೈವಲ್ಯ, ಪು.೩೨

೪೨. ನಿಜಾನಂದ ಕೈವಲ್ಯ, ಪು.೩೯

೪೩. ನಿಜಾನಂದ ಕೈವಲ್ಯ, ಪು.೪೧

೪೪. ನಿಜಾನಂದ ಕೈವಲ್ಯ, ಪು.೬೫

೪೫. ನಿಜಾನಂದ ಕೈವಲ್ಯ, ಪು.೬೨

೪೬. ನಿಜಾನಂದ ಕೈವಲ್ಯ, ಪು.೬೩

೪೭. ನಿಜಾನಂದ ಕೈವಲ್ಯ, ಪು.೭೨

೪೮. ನಿಜಾನಂದ ಕೈವಲ್ಯ, ಪು.೫೩

೪೯. ನಿಜಾನಂದ ಕೈವಲ್ಯ, ಪು.೫೮

೫೦. ಜ್ಞಾನಪ್ರದೀಪಿಕಾ, ಪು.೭೯

□□

**ಮುರುಘೇಂದ್ರ ಸ್ವಾಮಿಯ ಕುರಿತು ರಚಿತವಾದ ತತ್ವಪದಗಳು**

ಮುರುಘೇಂದ್ರಸ್ವಾಮಿಗಳ ಜೀವನದಲ್ಲಿ ಬಹಳಷ್ಟು ಜನರು ಬಂದು ಹೋಗುವಂತೆ ಅನೇಕ ಶಿಷ್ಯರು ಅವರ ಮಾರ್ಗದರ್ಶನದಲ್ಲಿ ಬದುಕನ್ನು ಮೋಕ್ಷದೆಡೆಗೆ ಒಯ್ದರು. ಅವರಲ್ಲಿ ಪ್ರಮುಖರಾದವರೆಂದರೆ,

೧. ಯಾದಗಿರಿಯ ಭೀಮಣ್ಣ ಕಟ್ಟಿಮನಿ

೨. ನಾಚವಾರದ ಗೋವಿಂದ ರೆಡ್ಡಿ, ಗುರುನಾಥರೆಡ್ಡಿ ಮತ್ತು ಮಕ್ಕಯ್ಯ ಸ್ವಾಮಿ

೩. ದುಗನೂರಿನ ಬುಗ್ಗಯ್ಯ

೪. ಅರಿಕೇರಿ ಜಂಬಯ್ಯ ಸಾಧು

೫. ಹಂಗನಳ್ಳಿಯ ವಳಕುಂದಿ ಬಸವಂತರಾಯ ಮತ್ತು ಅವರ ಮಗ ಶರಣಪ್ಪ

೬. ಹಂಗನಳ್ಳಿಯ ಪೋಲಿಸ ಬಸವಂತರಾಯ ಗೌಡ

೭. ದ್ಯಾವನೂರಿನ ಸಂಗಾರೆಡ್ಡಿ ಮತ್ತು ಅವರ ಹೆಂಡತಿ ಅನಂತಮ್ಮ ಗೌಡತಿ

೮. ಸಿದ್ಧಾಪುರದ ನರಸಪ್ಪಾ ಸಾಧು

೯. ರಾಜೋಟಿವೀರಸ್ವಾಮಿ ವಿಮಲಾಪುರ

೧೦. ಬಾಬಯ್ಯ

ಒಟ್ಟು ಈ ಹತ್ತು ಮಂದಿ ಶಿಷ್ಯರು ಮುರುಘೇಂದ್ರಸ್ವಾಮಿಯ ಸಮಕಾಲೀನವರಾಗಿದ್ದು ಅವರ ತತ್ವಗಳಿಗೆ ಬದ್ಧರಾಗಿ ಅವರ ಮಾರ್ಗದರ್ಶನದಂತೆ ಬದುಕಿದವರು. ಅವರಲ್ಲಿ ಸಿದ್ಧಾಪುರದ ನರಸಪ್ಪಾಸಾಧು, ರಾಚೋಟಿ ವೀರಸ್ವಾಮಿ ವಿಮಲಾಪುರ, ಮತ್ತು ಬಾಬಯ್ಯನವರು ಮುರುಘೇಂದ್ರಸ್ವಾಮಿಯನ್ನು ಕುರಿತು ತತ್ವಪದಗಳನ್ನು ರಚಿಸಿದ್ದಾರೆ.

ಸಿದ್ಧಾಪುರದ ನರಸಪ್ಪಾಸಾಧು 'ನರಸೇಶ್ವರ' ಎಂಬ ಅಂಕಿತದಲ್ಲಿ ತತ್ವಪದ ರಚಿಸಿದನೆಂದು ತಿಳಿದುಬರುತ್ತದೆ. ರಾಚೋಟಿ ವೀರಸ್ವಾಮಿಗಳು ಮುರುಘೇಂದ್ರರ ಕುರಿತು ಕನ್ನಡದಲ್ಲಿ ತತ್ವಪದ ರಚಿಸಿದರೆ, ಬಾಬಯ್ಯ ಹಿಂದಿ ಭಾಷೆಯಲ್ಲಿ ಹಾಡುಗಳನ್ನು ಬರೆದಿದ್ದಾನೆ.

**ರಾಚೋಟಿ ವೀರಸ್ವಾಮಿ ವಿಮಲಾಪುರ:** ಮುರುಘೇಂದ್ರಸ್ವಾಮಿಯ ಪ್ರೀತಿಯ ಶಿಷ್ಯರಲ್ಲಿ ಒಬ್ಬನಾಗಿದ್ದು, ಅವರ ನೆಲೆ ವಿಮಲಾಪುರವಾಗಿತ್ತು. ತಮ್ಮ ಜೀವಿತದ ಹೆಚ್ಚು ದಿನಗಳನ್ನು ಗುರುಗಳ ಜೊತೆಯಲ್ಲೇ ಕಳೆದ ಇವರು ಮುರುಘೇಂದ್ರ ಸ್ವಾಮಿಗಳ ಮಾರ್ಗದರ್ಶನದಂತೆ ಅವರ ಹೆಜ್ಜೆಯಲ್ಲಿಯೇ ನಡೆದು ಅನೇಕ

ತತ್ವಪದಗಳನ್ನು ರಚಿಸಿದ್ದಾನೆ. ನನಗೆ ಸುಮಾರು ೪೦,೫೦ ತತ್ವಪದಗಳು ಕ್ಷೇತ್ರಕಾರ್ಯದಲ್ಲಿ ಲಭಿಸಿವೆ. ತಮ್ಮ ಗುರುಗಳಂತೆ ಕನ್ನಡದಲ್ಲಿಯೇ ಜನಸಾಮಾನ್ಯರಿಗೆ ತಿಳಿಯುವ ಹಾಗೇ ಸರಳವಾಗಿ ತತ್ವಪದಗಳನ್ನು ರಚಿಸಿದ್ದಾರೆ. ಎಲ್ಲ ಹಾಡುಗಳಲ್ಲಿಯೂ ಗುರುಗಳನ್ನು ನೆನೆಯುವುದು ಮರೆತಿಲ್ಲ ಅಂತೆಲೇ ಅವರ ಹೆಸರನ್ನೇ ಮುರುಘೇಂದ್ರವೆಂದು ಅಂಕಿತದಲ್ಲಿ ಬಳಸಿದ್ದಾರೆ. ಮುರುಘೇಂದ್ರಸ್ವಾಮಿಗಳಿಗೆ ತಕ್ಕ ಶಿಷ್ಯರಾಗಿ ಗುರುಗಳು ಹೇಳಿದ ವಿಚಾರಗಳು ತಮ್ಮ ಹಾಡಿನಲ್ಲಿ ಹೇಳಿದರು. ಹೇಳುವ ಕ್ರಮ ಸ್ವಲ್ಪ ಬದಲಾದಂತೆ ಅಲ್ಲಲ್ಲಿ ಕಂಡುಬರುತ್ತವೆ.

ಎಲ್ಲ ತತ್ವಪದಕಾರರಂತೆ ರಾಚೋಟಿ ವೀರಸ್ವಾಮಿಗಳು ತಮ್ಮ ತತ್ವಪದಗಳನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಗಣಪತಿಯ ಸ್ತೋತ್ರವನ್ನು ಮುಂದಿಡುತ್ತಾರೆ.

"ಶರಣು ಶರಣು ಶರಣು ಗಣನಾಥಾ
ನಿಮ್ಮ ಚರಣ ಕಮಲ ಭಜಿಸುವೆನಯ್ಯಾ ಗಣನಾಥಾ
ಮೊದಲಿನ ಪೂಜೆ ನಿಮ್ಮದಯ್ಯ ಗಣನಾಥಾ
ಪಾದ ಪದ್ಮಂಗಳಿಗೆ ಪೂಜಿಸುವೆನಯ್ಯ ಗಣನಾಥಾ
ತಾಯಿ ನೀನೆ ತಂದೆ ನೀನೆ ಗಣನಾಥಾ
ಬಂಧು ನೀನೆ ಬಳಗ ನೀನೆ ಗಣನಾಥಾ
ದೇವರೊಳು ದೇವನೀನು ಗಣನಾಥಾ
ದಿವ್ಯಚರಣರ ಜನರಿಗೆ ವರವನೀವ ಗಣನಾಥಾ
ಭಜನಿಗೆ ವಿಘ್ನಬಾರದಂತೆ ಗಣನಾಥಾ
ಸುಜನರ ಹೃದಯ ಕಮಲದಲ್ಲಿರುವ ಗಣನಾಥಾ
ಧರಿಯೊಳು ನಿರ್ಮಲಗಿರಿವಾಸ ಗಣನಾಥಾ
ಗುರು ಮುರುಘೇಂದ್ರ ವರಪುತ್ರ ಗಣನಾಥಾ"[೧]

ನಮ್ಮ ಹಿಂದೂ ಧರ್ಮದಲ್ಲಿ ಹೆಸರು ಹೇಳಲು ಸಾಧ್ಯವಾಗದಷ್ಟು ದೇವರುಗಳನ್ನು ನಮ್ಮ ಪೂರ್ವಜರು ಕಲ್ಪಿಸಿಕೊಂಡಿದ್ದಾರೆ. ಒಂದೊಂದಕ್ಕೂ ಒಬ್ಬೊಬ್ಬರು ದೇವರು ಅವುಗಳಲ್ಲಿಯೇ ಗಂಡು ದೇವರು, ಹೆಣ್ಣು ದೇವರು, ಶಾಂತದೇವರು, ಉಗ್ರದೇವರು ಅವುಗಳಲ್ಲಿ ಕೆಲವು ಸಸ್ಯಹಾರಿ ದೇವರು ಮತ್ತು ಮಾಂಸಹಾರಿ ದೇವರು, ಇನ್ನೆಷ್ಟೊ ದೇವರುಗಳೊ ಹೇಳಲಾಗುವುದಿಲ್ಲ. ಇಂತಹ ದೈವತ್ವದ ತಳಹದಿಯ ಮೇಲೆ ನಿಂತಿರುವ ನಮ್ಮ ಸಮಾಜದ ಜನರು ಯಾವುದೇ ಶುಭ ಕಾರ್ಯಗಳು ನಡೆಯುವಾಗ ಅಲ್ಲೊಬ್ಬ ದೇವರನ್ನು ನಿರ್ಮಿಸಿಕೊಂಡರು, ಆ ದೇವರೇ ಗಣಪತಿ. ಗಣಪತಿಯ ಪೂಜೆ ಮೊದಲು ಮಾಡುವುದರಿಂದ ಯಾವುದೇ ವಿಘ್ನಗಳು ಬರುವುದಿಲ್ಲ ಎಂಬ ನಂಬಿಕೆ ನಮ್ಮಲ್ಲಿ ಅಚಲವಾಗಿದೆ ಅಂತಲೇ ಗಣಪತಿಯನ್ನು ವಿಘ್ನನಿವಾರಕ ಎಂದು ಕರೆಯುತ್ತೇವೆ.

ಮುರುಘೇಂದ್ರಸ್ವಾಮಿಗಳ ನೆರಳಿನಲ್ಲಿಯೇ ನಡೆದರು ರಾಚೋಟಿ ವೀರಸ್ವಾಮಿಗಳು. ತಮ್ಮ ಅಚಲತೆಯನ್ನು ಎಲ್ಲಿಯೂ ಬಿಟ್ಟಿಲ್ಲ. ಮೇಲ್ನೋಟಕ್ಕೆ ಗುರುಗಳ ಹಾಗೇ ಹಾಡುಗಳನ್ನು ರಚಿಸಿದ್ದಾರೆ. ತಾವು ಹೇಳಬೇಕೆಂದಿರುವುದನ್ನು ಸ್ಪಷ್ಟವಾಗಿ ಹೇಳಿದ್ದಾರೆ.

"ಕಾಸಿಗ್ಹೋಗ್ವದ್ಯಾಕೊ

ತೀರ್ಥ ತಂದು ಬ್ಯಾಸರಾಗುವದ್ಯಾಕೊ

ಸೋಸಿ ನೋಡಿ ಭವದಾಸೆ ತ್ಯಜಿಸಲು

ಕಾಶಿ ತೀರ್ಥ ತನ್ನ ಕಣ್ಣೊಳಗಿರುವುದು"[೨]

ಎಂದು ಮುರುಘೇಂದ್ರಸ್ವಾಮಿಗಳು ತೀರ್ಥ ಯಾತ್ರೆ ಕೈಗೊಳ್ಳುವವರನ್ನು ತಡೆದು ನೀನು ಮಾಡಿದ ಪಾಪಗಳಿಗೆ ಕಾಶಿಯಲ್ಲಿನ ತೀರ್ಥ ತಂದು ಕುಡಿದರು ಪಾಪ ಪರಿಹಾರವಾಗುವುದಿಲ್ಲ. ಇಲ್ಲಿದ್ದುಕೊಂಡೆ ಮಾಡಿದ ಪಾಪಕ್ಕಾಗಿ ಪಶ್ಚಾತ್ತಾಪ ಪಟ್ಟು, ನೋವಿನಿಂದ ಕಣ್ಣಲ್ಲಿ ನೀರು ತಂದರೆ ಅದುವೇ ನಿನಗೆ ಕಾಶಿ ತೀರ್ಥವಾಗುತ್ತದೆ ಎಂದಿದ್ದಾರೆ.

ಆದರೆ ರಾಚೋಟಿ ವೀರಸ್ವಾಮಿಗಳು

"ಕಾಶಿಗ್ಹೋಗಬೇಕು ಕಾಶಿ ತೀರ್ಥ ಸೇವಿಸಬೇಕು

ಹೇಸಿ ಗುಣಗಳ ನಾಶ ಮಾಡಿ ಶಿವಧ್ಯಾಸದೊಳಿರಬೇಕು

ಆಸೆ ಅಳಿಯಬೇಕು ಆಶೆಯ ಮೂಲವು ತಿಳಿಯಬೇಕು

ಆಶೆರಹಿತ ಪರಮಾತ್ಮನ ಧ್ಯಾನದೊಳು ಮಗ್ನನಾಗಿರಬೇಕು"[೩]

ಭಾರತೀಯರಿಗೆ ತೀರ್ಥಯಾತ್ರೆ ಎಂದರೆ ಪವಿತ್ರ ಭಾವನೆ. ಅದನ್ನು ಜೀವಿತದ ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಆಶ್ರಮಗಳನ್ನು ಪೂರೈಸುವಾಗ ಗೃಹಸ್ಥ ಆಶ್ರಮದ ಕೊನೆಯಲ್ಲಿ, ವಾನಪ್ರಸ್ಥದ ಮೊದಲಲ್ಲಿ ಅಂದರೆ ಐವತ್ತು ವರ್ಷಗಳ ನಂತರ ತೀರ್ಥಯಾತ್ರೆ ಕೈಗೊಳ್ಳಬೇಕೆಂದು ಧರ್ಮ ಪುರಾಣಗಳು ಹೇಳಿವೆ. ಅದರಂತೆ ರಾಚೋಟಿ ವೀರಸ್ವಾಮಿಗಳು ತೀರ್ಥಯಾತ್ರೆ ಮಾಡಬೇಕೆಂದು ಹೇಳಿದ್ದಾರೆ. ತೀರ್ಥಯಾತ್ರೆ ಮಾಡುವ ಮೊದಲು ನಮ್ಮ ಆತ್ಮವನ್ನು ಶುದ್ಧೀಕರಿಸಿ, ಕೆಟ್ಟಗುಣಗಳನ್ನು ಕಳೆದು ಶಿವನ ಧ್ಯಾನದಲ್ಲಿ ಯಾತ್ರೆ ಮಾಡಬೇಕು. ಯಾವುದೇ ರೀತಿಯ ಆಸೆಆಕಾಂಕ್ಷೆಗಳಿಂದ ನಮಗೆ ಇದು ಆಗಲಿ, ಅದು ಆಗಲಿ ಎಂದು ದೇವರಲ್ಲಿ ಹರಕೆ ಹೊತ್ತು ಅದು ಈಡೇರಿದರೆ ನಿನ್ನ ದರ್ಶನಕ್ಕೆ ಬರುತ್ತೆನೆಂದು ಆಶಿಸಿ ಮೊರೆ ಹೋಗಬಾರದು. ಅಂತಲೇ ಜೀವನದ ಎಲ್ಲ ಆಗುಹೋಗುಗಳು ನಡೆದ ಮೇಲೆಯೇ ತೀರ್ಥಕ್ಷೇತ್ರಗಳ ದರ್ಶನ ಮಾಡಬೇಕು. ಆಗಲೇ ದೇವರ ನಿಜ ಸ್ವರೂಪ ನಮಗೆ ಗೋಚವಾಗುವುದು ಎಂದು ರಾಚೋಟಿವೀರ ಸ್ವಾಮಿಗಳು ಹೇಳಿದ್ದಾರೆ. ಇಲ್ಲಿ ಗುರುಶಿಷ್ಯರು ರಚಿಸಿದ ಹಾಡು ಮೇಲ್ನೋಟಕ್ಕೆ ಬೇರೆ ಬೇರೆ ಎನಿಸಿದರು ಅಂತರಾಳದ ಮರ್ಮ ಎರಡರಲ್ಲಿಯೂ ಒಂದೇ ಆಗಿದೆ.

"ಬೈಲುಗಂಬರ ಬಂದನೊ ನಮ್ಮೂರಿಗೊಬ್ಬ

ಬೈಲುಗಂಬರ ಬಂದನೊ

ಬೈಲುಗಂಬರ ಬಂದಾನ ಭಲೆ ಭಲೆ ಸಾಮಾನು ಮಾಡ್ತಾನ

ಬಿಲ್ಲುಬಾಣ ಬರ್ಚಿ ತಲ್ವಾರ ಬಂದೂಕ ತಯಾರ ಮಾಡ್ತಾನ

ತಿತ್ತಿ ತಾನೆ ಊದುತಾನೂ ಸುತ್ತಿಗೆ ಡಬ್ಬಿ ಎತ್ತಿ ತಾನೆ ಹಾಕುತಾನೊ

ಒತ್ತಿ ಹಣ್ಣು ಮಾಡುತಾನೊ

ತುತ್ತು ಮಾಡಿ ಉಣುಸುತಾನೆ

ಇತ್ತ ಹಗಲಿರಳೆನ್ನದೆ

ಕಷ್ಟನಿಲುಕಡಿಲ್ಲದೆ ನಡಿಸುತಾನ"[4]

ಪ್ರತಿಯೊಂದು ಜೀವಿಗೂ ಒಬ್ಬರು ಸೃಷ್ಟಿಕರ್ತ ಇರುವುದು ಸತ್ಯ. ಇಲ್ಲಿ ಮನುಷ್ಯ ಜೀವಿಯನ್ನು ಸೃಷ್ಟಿಸಿದವನು ದೇವರು ಎಂತಲೇ ರಾಚೋಟಿ ವೀರಸ್ವಾಮಿಗಳು ದೇವರನ್ನು ಬೈಲುಗಂಬರ ಎಂದು ಮೇಲಿನ ಹಾಡಿನಲ್ಲಿ ಕರೆದಿದ್ದಾರೆ. ಸಾಮಾನ್ಯವಾಗಿ ಒಂದು ಕಡೆ ನೆಲೆ ನಿಲ್ಲದೆ ಊರಿಂದ ಊರಿಗೆ ಅಲೆದಾಡುವ ಬೈಲುಕಂಬಾರರು ದಿನನಿತ್ಯದ ಹೊಟ್ಟೆಪಾಡಿಗಾಗಿ ಕಬ್ಬಿಣವನ್ನು ಮಣಿಸಿ, ಕರಗಿಸಿ, ವಸ್ತುಗಳನ್ನು ತಯಾರಿಸಿ ಮಾರಾಟಮಾಡುತ್ತಾರೆ. ಅವರಿಗೆ ಚಿರಾಸ್ತಿ-ಸ್ಥಿರಾಸ್ತಿಗಳಿರುವುದಿಲ್ಲ ಮೇಲಿನ ಅಂಶವನ್ನು ಗಮನಿಸಿಯೇ ದೆವರನ್ನು ಬೈಲುಗಂಬರರಿಗೆ ಹೋಲಿಸಲಾಗಿದೆ.

ಭಗವಂತ ಈ ಲೋಕದಲ್ಲಿ ನಾನಾ ತರಹದ ಜನರನ್ನು ಹುಟ್ಟಿಸುತ್ತಾನೆ. ಬೇರೆ ಬೇರೆ ಗುಣಗಳನ್ನು ಅವರಿಗೆ ಕೊಡುತ್ತಾನೆ. ಎಲ್ಲರ ಗುಣಗಳು ಒಂದೇ ಆಗಿರುವುದಿಲ್ಲ. ಎಲ್ಲರಿಗೂ ಆಸೆಗಳನ್ನು ಹುಟ್ಟಿಸುತ್ತಾನೆ. ತಮ್ಮ ಆಸೆಗಳನ್ನು ನೆರವೇರಿಸಲು ಅವರಲ್ಲಿ ಒಳ್ಳೆತನ, ಕೆಟ್ಟತನಗಳನ್ನು ಹುಟ್ಟಿಸುತ್ತಾನೆ. ಆಸೆಗಳು ಈಡೇರದಿದ್ದರೆ ನಾವು ಈ ಭವ ಬದುಕಿನಲ್ಲಿ ಒದ್ದಾಡುವುದನ್ನು ಮೇಲೆ ನಿಂತು ನೋಡುತ್ತಾನೆ. ಕಷ್ಟ ಕೊಡುತ್ತಾನೆ, ಬಳಿಕ ಅದಕ್ಕೆ ಅವನೇ ಪರಿಹಾರಗಳನ್ನು ನೀಡುತ್ತಾನೆ. ಈ ರೀತಿ ಭಗವಂತ ನಡೆಸುವ ಗೊಂಬೆಗಳಾಗಿ ನಾವು ಜೀವನ ಕಳೆಯುತ್ತೇವೆ.

ಮುರುಘೇಂದ್ರಸ್ವಾಮಿಗಳ ಪರಮಶಿಷ್ಯರಾದ ಯಾದಗಿರಿಯ ಭೀಮಾಶಂಕರ ಕಟ್ಟಿಮನಿಯವರು ಅಶ್ವಿನಿ ಕ್ಯಾಸೆಟ ಕಂಪನಿಯಲ್ಲಿ ಶ್ರೀ ಕರಿಘೂಳೇಶ್ವರ ತತ್ವಪದಗಳು ಭಾಗ-೧ ಮತ್ತು ಭಾಗ-೨ ಎಂದು ಎರಡು ಕ್ಯಾಸೆಟಗಳನ್ನು ಬಿಡುಗಡೆ ಮಾಡಿದ್ದಾರೆ. ಈ ಕ್ಯಾಸೆಟಗಳಲ್ಲಿ ಒಟ್ಟು ಹದಿಮೂರು ಭಜನಾ ಹಾಡುಗಳಿವೆ.

**ಭಾಗ-೧ರಲ್ಲಿ ಮೂಡಿರುವ ಭಜನಾ ಹಾಡುಗಳು (ತತ್ವಪದಗಳು)**

೧. ಶ್ರೀ ಗಣನಾಯಕನೆ

೨. ಚಂದ್ರರ್ಕ ಕೋಟಿತೇಜಾ

೩. ಕಣ್ಣಿನಲ್ಲಿ

೪. ಹರನ ಭಜಿಸಲಿಲ್ಲಾ

೫. ಏನು ಬೇಡಲಿ

೬. ಇಲ್ಲ ಇಲ್ಲ

೭. ಶ್ರೀ ಗುರುರಾಯ

**ಭಾಗ-೨ರಲ್ಲಿ ಮೂಡಿರುವ ಭಜನಾ ಹಾಡುಗಳು (ತತ್ವಪದಗಳು)**

೧. ಅಲಿಪೂರದಲ್ಲಿ

೨. ಸಾಕು ಸಾಕು

೩. ಯಾಕೆ ಸಂಸಾರ

೪. ದೇಶ ದೇಶವೂ

೫. ಹುಸೇನ ಸಾಹೇಬರ

೬. ಎಂದಾದರೊಂದು ದಿನ

**ಮುರುಘೇಂದ್ರಸ್ವಾಮಿಗಳ ಸಾಹಿತ್ಯ**

ಮುರುಘೇಂದ್ರಸ್ವಾಮಿಗಳ ಬಗ್ಗೆ ಹುಟ್ಟಿಕೊಂಡ ಮತ್ತು ಇಂದಿಗೂ ನಿರ್ಮಾಣಗೊಳ್ಳುತ್ತಿರುವ ಸಾಹಿತ್ಯ ದೊಡ್ಡದು. ಮುರುಘೇಂದ್ರಸ್ವಾಮಿಯವರು ಲಿಂಗೈಕ್ಯರಾಗುವುದಕ್ಕೂ ಸ್ವಲ್ಪ ದಿನಗಳ ಮೊದಲು ಸ್ವತಃ ಮುರುಘೇಂದ್ರಸ್ವಾಮಿಗಳೇ ತಮ್ಮ "ನಿಜಾನಂದ ಕೈವಲ್ಯ"ವನ್ನು ಮುದ್ರಣಗೊಳಿಸಿದ್ದರು. ಯಾದಗಿರಿಯ 'ಶಂಕರಾನಂದ ಪ್ರಿಂಟಿಂಗ್ ಪ್ರೆಸ್'ನಲ್ಲಿ ಅಚ್ಚಾಕಿಸಿದ ಈ ಕೃತಿ ಸ್ವತಃ ಮುರುಘೇಂದ್ರಸ್ವಾಮಿಗಳಿಂದ ಮುದ್ರಿತವಾದ ಏಕೈಕ ಕೃತಿಯಾಗಿದೆ. ಅವರು ಬರೆದ ಇನ್ನಾವುದೇ ಕೃತಿ ಇಲ್ಲಿಯವರೆಗೂ ಅಚ್ಚಾಗಿಲ್ಲ ಅವು ಹಸ್ತಪ್ರತಿಗಳಾಗಿಯೇ ಉಳಿದಿವೆ.

ಮುರುಘೇಂದ್ರಸ್ವಾಮಿಗಳು ಕಾಲವಾದ ಮೇಲೆ ಅವರ ಕುರಿತು ಸಾಹಿತ್ಯ, ನಾಟಕ ಮತ್ತು ಕ್ಯಾಸೆಟ್‌ಗಳು ರೂಪಗೊಂಡಿವೆ. ರಾಮಲಿಂಗೇಶ್ವರ ತರುಣ ಸಂಘ ಹಂಗನಳ್ಳಿ, ತಾಲೂಕು ಸೇಡಂ ಇವರ ಪ್ರಕಾಶನದಡಿಯಲ್ಲಿ

ಎಲ್.ಬಿ.ಕೆ. ಅಲ್ವಾಳ ಅವರು "ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ" ಎಂಬ ನಾಟಕವನ್ನು ರಚಿಸಿದ್ದಾರೆ.

"ವೈರಾಗ್ಯ ಚಕ್ರವರ್ತಿ ಶ್ರೀ ಕರಿಘೂಳೇಶ್ವರ ಮಹಾತ್ಮೆ"ಯಲ್ಲಿ ಸಂಪೂರ್ಣವಾಗಿ ಮುರುಘೇಂದ್ರ ಸ್ವಾಮಿಗಳ ಹುಟ್ಟಿನಿಂದ ಅವರು ನೆಲೆಗೊಂಡು ಜೀವ ಬಿಡುವವರೆಗಿನ ಎಲ್ಲ ಘಟನೆಗಳನ್ನು ತಿಳಿಸಲಾಗಿದೆ. ಈ ನಾಟಕ ಯಶಸ್ವಿ ಪ್ರದರ್ಶನಗೊಂಡು, ಜನಸಾಮಾನ್ಯರಿಂದ "ಮೂರು ಮುತ್ತುಗಳು" ಎಂಬ ಮರು ಹೆಸರನ್ನು ಪಡೆದುಕೊಂಡಿದೆ.

ಮುರುಘೇಂದ್ರಸ್ವಾಮಿಗಳ ತತ್ವಪದಗಳನ್ನು ಸಂಗ್ರಹಿಸಿದ ಡಿ.ಎಲ್. ಕುಮಾರ ತೊಂಬತ್ತು ತತ್ವಪದಗಳನ್ನು ಸಂಗ್ರಹಿಸಿದ್ದಾರೆ. ಶರಣ ಪ್ರಕಾಶನ ಕಲಬುರ್ಗಿ ಅಡಿಯಲ್ಲಿ ಪ್ರಕಟವಾದ "ಶ್ರೀ ಕರಿಘೂಳೇಶ್ವರ ತತ್ವಪದಗಳು" ಎಂಬ ಕೃತಿಯಲ್ಲಿ ಸೋಮಶೇಖರಪ್ಪ ಎಸ್. ಭಾವಿಕಟ್ಟಿಯವರು ಅನೇಕ ತತ್ವಪದಗಳನ್ನು ಸಂಗ್ರಹಿಸಿ ಅವುಗಳನ್ನು ೧೯೯೨ರಲ್ಲಿ ಪ್ರಕಟಿಸಿದ್ದಾರೆ.

**ಅಡಿ ಟಿಪ್ಪಣಿಗಳು**

೧. ನಿಜಾನಂದ ಕೈವಲ್ಯ, ಪು.೯೫

೨. ನಿಜಾನಂದ ಕೈವಲ್ಯ, ಪು.೩೭

೩. ನಿಜಾನಂದ ಕೈವಲ್ಯ, ಪು.೯೭

೪. ನಿಜಾನಂದ ಕೈವಲ್ಯ, ಪು.೯೭

□□

ಕನ್ನಡ ಸಾರಸತ್ತ್ವಲೋಕಕ್ಕೆ ಹೈದರಾಬಾದ್-ಕರ್ನಾಟಕದ ಕೊಡುಗೆ ಅಪಾರ. ಇಲ್ಲಿಯ ನೆಲದ ಕಲೆ, ಆಚಾರ, ವಿಚಾರ, ಸಂಪ್ರದಾಯ, ಸಂಸ್ಕೃತಿಗಳನ್ನು ಅದೆಷ್ಟೋ ವಿಭಿನ್ನತೆಯನ್ನು ಪಡೆದುಕೊಂಡಿದೆ. ಅವಧೂತರು, ಅನುಭಾವಿಗಳು, ತತ್ತ್ವಪದಕಾರರು, ಜಾನಪದ ಹಾಡುಗಾರರು ಈ ನೆಲದಲ್ಲಿ ಜನಿಸಿದ್ದಾರೆ ಎಂಬುವುದು ನಮಗೆ ಕಂಡುಬರುವುದು. ಹಾಗೆಯೇ ಅನೇಕರು ತತ್ತ್ವಪದಗಳನ್ನು ಹಾಡಿ ಎಲೆಮರೆಕಾಯಿ ಜೀವನ ನಡೆಸಿ, ಬೆಳಕಿಗೆ ಬರಲಾರದೆ ಕಣ್ಮರೆಯಾಗಿದ್ದಾರೆ. ಆ ನಿಟ್ಟಿನಲ್ಲಿ ಜಾನಪದದ ಹಿನ್ನೆಲೆಯಲ್ಲಿ ತತ್ತ್ವಪದಕಾರರೂ ಅನುಭಾವಿಗಳೂ ಆದ ಮುರುಘೇಂದ್ರಸ್ವಾಮಿಗಳ ಬದುಕು ಬರಹದ ಚಿತ್ರಣವನ್ನು ಹಿಡಿದಿಡಲು ಪ್ರಸ್ತುತ ಅಧ್ಯಾಯದಲ್ಲಿ ಪ್ರಯತ್ನಪಡಲಾಗಿದೆ.

ಹಿಂದಿನವರು ಬದುಕಿದ ರೀತಿಯನ್ನು, ಅವರ ಬರಹದ ಜೀವನವನ್ನು ಇಂದಿನ ಪೀಳಿಗೆಯವರಿಗೆ ತಿಳಿಸಬೇಕಾಗಿರುವುದು ಆದ್ಯ ಕರ್ತವ್ಯ. ಈ ಅಧ್ಯಾಯನದಲ್ಲಿ ಅಂತಹ ಕಾರ್ಯಗೈಯಲು ಪ್ರಯತ್ನಿಸಲಾಗಿದೆ. ಮುರುಘೇಂದ್ರಸ್ವಾಮಿಯವರ ತತ್ತ್ವಪದಗಳಲ್ಲಿರುವ ಜಾತಿ, ಧರ್ಮ, ಭಾಷೆ, ಸಂಸ್ಕೃತಿ, ಜೀವನದ ಸತ್ಯತೆಗಳ ಕುರಿತು ವಿಶ್ಲೇಷಿಸಲಾಗಿದೆ. ಜಾನಪದೀಯವಾಗಿ ಪ್ರಚಲಿತವಿರುವ ತತ್ತ್ವಪದಗಳ ಹಿನ್ನೆಲೆ, ಅವುಗಳು ಸಮಾಜದ ಮೇಲೆ ಯಾವ ರೀತಿ ಪ್ರಭಾವ, ಪರಿಣಾಮಗಳನ್ನು ಬೀರುತ್ತವೆ ಎಂಬುದನ್ನು ಕ್ಷೇತ್ರಕಾರ್ಯದ ಮೂಲಕ ಅಧ್ಯಯನಿಸಲಾಗಿದೆ.

ಪ್ರಸ್ತುತ ಅಧ್ಯಯನದಲ್ಲಿ ಒಟ್ಟು ಆರು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ, ಹಾಗೂ ಅಧ್ಯಯನಕ್ಕೆ ಬಳಸಿಕೊಂಡ ಆಕರಸಾಮಾಗ್ರಿ, ಅಧ್ಯಯನದ ವಿಧಾನವನ್ನು ಹೇಳಲಾಗಿದೆ. ಅಧ್ಯಾಯ ಎರಡರಲ್ಲಿ ಮುರುಘೇಂದ್ರಸ್ವಾಮಿಯ ಬದುಕನ್ನು ಚಿತ್ರಿಸಲಾಗಿದೆ, ಇಲ್ಲಿ ಮುರುಘೇಂದ್ರಸ್ವಾಮಿಗಳು ಹುಟ್ಟಿನಿಂದ ಸ್ವರ್ಗಸ್ಥರಾಗುವವರೆಗಿನ ಎಲ್ಲ ಘಟನೆಗಳನ್ನು ಎಳೆಎಳೆಯಾಗಿ ಬಿಡಿಸಲಾಗಿದೆ. ಅಧ್ಯಾಯ ಮೂರರಲ್ಲಿ ಮುರುಘೇಂದ್ರಸ್ವಾಮಿಯ ಬರಹವನ್ನು ವಿವರವಾಗಿ ನೋಡಲಾಗಿದ್ದು, ಅವರ ಕೃತಿಗಳನ್ನು ಸಂಕ್ಷಿಪ್ತವಾಗಿ ವಿವರಿಸಿದ್ದು, "ನಿಜಾನಂದ ಕೈವಲ್ಯ"ದಲ್ಲಿನ ತತ್ತ್ವಪದಗಳಲ್ಲಿ ನಿರೂಪಣೆಯಾದ ಸ್ತುತಿಹಾಡುಗಳು, ಗುರುವಿನ ಕುರಿತಾದ ಹಾಡುಗಳು, ವೀರಶೈವ ಧರ್ಮದ ಹಾಡುಗಳು, ಜೋಗುಳ ಪದ, ನೀತಿಬೋಧನೆ ಮತ್ತು ಮಂಗಳಾರತಿ ಹಾಡುಗಳನ್ನು ಚರ್ಚಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಮುರುಘೇಂದ್ರ ಸ್ವಾಮಿಯ ಕುರಿತು ಅವರ ಶಿಷ್ಯರಿಂದ ರಚಿತವಾದ ಸಾಹಿತ್ಯ, ನಾಟಕ, ತತ್ತ್ವಪದ ಮತ್ತು ಧ್ವನಿಸುರುಳಿಗಳನ್ನು ಕ್ಷೇತ್ರಕಾರ್ಯದಿಂದ ಸಂಗ್ರಹಿಸಿ ಇಲ್ಲಿ ದಾಖಲಿಸಲಾಗಿದೆ. ಅಧ್ಯಾಯ ಐದು ಮತ್ತು ಆರರಲ್ಲಿ ಸಮಾರೋಪದೊಂದಿಗೆ ಅನುಬಂಧಗಳನ್ನು ನೀಡಲಾಗಿದೆ.

ಒಟ್ಟಾರೆಯಾಗಿ ತನ್ನ ಗುರುತನ್ನು ಕಳೆದುಕೊಳ್ಳುತ್ತಿರುವ ಜಾನಪದವನ್ನು ಉಳಿಸಿಬೆಳೆಸುವ ಉದ್ದೇಶದಿಂದ ಈ ಅಧ್ಯಯನ ಮಾಡಲಾಗಿದ್ದು, ಪ್ರಸ್ತುತ ಸಂದರ್ಭದಲ್ಲಿ ಮುರುಘೇಂದ್ರಸ್ವಾಮಿಗಳಂತೆ ನಿರ್ಲಕ್ಷ್ಯಕ್ಕೆ ಒಳಗಾದವರ ಚರಿತ್ರೆ ಮತ್ತು ಅವರು ಈ ನಾಡಿಗೆ ಸಲ್ಲಿಸಿದ ಕೊಡುಗೆಗಳನ್ನು ಕಾಲಗರ್ಭದಿಂದ ಹೊರತೆಗೆಯುವುದು ಅವಶ್ಯಕವಾಗಿದೆ. ಈ ಅಧ್ಯಯನದಲ್ಲಿ ಅಂತಹ ಪ್ರಯೋಗವನ್ನು ಮಾಡಲಾಗಿದೆ.

□□

# ಅನುಬಂಧಗಳು

೧.೧ ಮುರುಘೇಂದ್ರಸ್ವಾಮಿಯ ಹುಟ್ಟಿದ ಮತ್ತು ನೆಲೆಸಿದ ಸ್ಥಳದ ನಕ್ಷೆಯ ಚಿತ್ರ.

೧.೨ ಮುರುಘೇಂದ್ರಸ್ವಾಮಿಯ ಸಂಚಾರ ಮಾಡಿದ ಸ್ಥಳಗಳ ನಕ್ಷೆಯ ಚಿತ್ರ.

೧.೩ ಮುರುಘೇಂದ್ರಸ್ವಾಮಿಯ ಗುಡಿಯಿರುವ ಸ್ಥಳಗಳ ನಕ್ಷೆಯ ಚಿತ್ರ.

೧.೪ ಮುರುಘೇಂದ್ರಸ್ವಾಮಿಯ ನೆಲೆಗೊಂಡ ಸ್ಥಳದ ನಕಾಶೆ.

೨. ಮುರುಘೇಂದ್ರಸ್ವಾಮಿ ಪುಣ್ಯತಿಥಿ ಮಹೋತ್ಸವದ ಆಹ್ವಾನ ಪತ್ರಿಕೆ.

೩. ಮುರುಘೇಂದ್ರಸ್ವಾಮಿಯ ಭಜನೆಗಳ ಧ್ವನಿಸುರುಳಿಯ ಮುಖಪುಟದ ಚಿತ್ರಗಳು.

೪. ಛಾಯಚಿತ್ರಗಳು.

೫. ಪರಾಮರ್ಶನ ಗ್ರಂಥಗಳು.

೬. ವಕ್ತೃಗಳ ವಿವರ.

## ಮರುಳೇಂದ್ರಸ್ವಾಮಿ ಹುಟ್ಟಿದ ಮತ್ತು ನೆಲೆಸಿದ ಸ್ಥಳ



## ಮುರುಘೇಂದ್ರಸ್ವಾಮಿಯ ಗುಡಿಗಳು



॥ ಶ್ರೀ ಗುರು ಪ್ರಸನ್ನ ॥





ಇಳೆ ನಿಮ್ಮಧಾನ। ಮಳೆ ನಿಮ್ಮಧಾನ। ಬೆಳೆ ನಿಮ್ಮಧಾನ ಸೋಸುವಗಾಳಿಯು ನಿಮ್ಮಧಾನ।
ನಿಮ್ಮ ಧಾನವನುಂಡು ಅನ್ಯರ ನೊಗಳುವ ಕುನ್ನಿನಾಯಿಗಳಿಗೇನೆಂಬೆ ರಾಮನಾಥ।

# ಶ್ರೀ ಗುರು ವರಕವಿ ಮುರುಗೇಂದ್ರ ಸ್ವಾಮಿಯವರ

**ಪೂಣ್ಯ ತಿಥಿ ಮಹೋತ್ಸವಾಹ್ವಾನ ಪತ್ರಿಕೆ**

ಮುರುಗೇಂದ್ರಸ್ವಾಮಿ ಮಠ, ಯಾದಗಿರಿ (ಹಿರೇಅಗಸಿ)

ಮಹನೀಯರೆ,

ಪ್ರತಿ ವರ್ಷದ ಪದ್ಧತಿಯಂತೆ ಶ್ರೀ ವರಕವಿ ಮುರುಗೇಂದ್ರ ಸ್ವಾಮಿಯವರ 23ನೇ ಪೂಣ್ಯತಿಥಿಯು ಇದೇ ಶಕೆ 1925 ಸ್ವಭಾನುನಾಮ ಸಂವತ್ಸರ ಕಾರ್ತಿಕ ಬ॥ ನವಮಿ ಮಂಗಳವಾರ ದಶಮಿ ಬುಧವಾರ ಎರಡು ದಿವಸಗಳವರೆಗ ಕೆಳಗೆ ಕಾಣಿಸಿದ ಕಾರ್ಯಕ್ರಮಾನುಸಾರ **ಶ್ರೀ ಕೊಟ್ರೇಶ್ವರ ಸ್ವಾಮಿಗಳು ರಾಮಗಿರಿ ಹಿರೇಮಠ**, ಯಾದಗಿರಿ ಇವರ ಅಧ್ಯಕ್ಷತೆಯಲ್ಲಿ ಭುಹು ವಿಜ್ರಂಭಣೆಯಿಂದ ಜರುಗುವದು ತಾವು ಬಂಧು - ಮಿತ್ರರೊಡನೆ ಆಗಮಿಸಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಶ್ರೀ ಗುರು ಕೃಪೆಗೆ ಪಾತ್ರರಾಗಬೇಕೆಂದು ವಿನಂತಿ .

## ಕಾರ್ಯಕ್ರಮಗಳ ವಿವರ

ಕಾರ್ತಿಕ ಬ॥ ನವಮಿ ದಿನಾಂಕ : 18 - 11 - 2003 **ಗುರುವಾರ ಸಾಯಂಕಾಲ 6 ಗಂಟೆಯಿಂದ ಶ್ರೀ ವರಕವಿ ಮುರುಗೇಂದ್ರ ಸ್ವಾಮಿಗಳ ಭಾವಚಿತ್ರದ ಮೆರವಣಿಗೆಯು ವಾದ್ಯ ವೈಭವ ಮತ್ತು ಕುದುರೆ ಆಟದೊಡನೆ ಮೈಲಾಪೂರ ಅಗಸಿಯಿಂದ ಹೊರಟು ಮಠವನ್ನು ತಲುಪುವದು ರಾತ್ರಿ ಸಂಪೂರ್ಣ ಭಜನೆ, ಕೀರ್ತನೆ ಹಾಗೂ ಗುರುಭಕ್ತರಾದ ಶ್ರೀ ಭೀಮರಾವ ಸಾಲಿ ಮು॥ ಸಾತನೂರ ಇವರು ಆಗಮಿಸುವರು .**

ಕಾರ್ತಿಕ ಬ॥ ದಶಮಿ ದಿನಾಂಕ : 19-11-2003 ಬುಧವಾರ ಉದಯ 6 ಗಂಟೆಗೆ ಕರ್ತೃಗದ್ದುಗೆಗೆ ರುದ್ರಾಭಿಷೇಕ ಮತ್ತು ಸಹಸ್ರ ಬಿಲ್ವಾರ್ಚನೆ ಶಾಸ್ತ್ರಿಗಳ ಪೌರೋಹಿತ್ಯ ದೊಡನೆ ನಡೆಯುವದು ನಂತರ ಮುಂಗಳಾರುತಿ ತೀರ್ಥಪ್ರಸಾದ ಅನ್ನ ಸಂತರ್ಪಣೆ .

| ಅಧ್ಯಕ್ಷರು | ಕಾರ್ಯದರ್ಶಿಗಳು |
|---|---|
| ಶ್ರೀ ಹನುಮಂತರಾವ ಯೆಂದೆ | ಶ್ರೀ ಭೀಮಣ್ಣಾ ಕಟ್ಟಿಮನಿ , ಶರಣಪ್ಪ ಬಂದಳ್ಳಿ |

ಶ್ರೀ ಶಂಕರಾನಂದ : 652984

## ಬ. ಛಾಯಚಿತ್ರಗಳು

೧. ಮುರುಘೇಂದ್ರಸ್ವಾಮಿಯ ಭಾವಚಿತ್ರ.

೨. ರಾಮಲಿಂಗ, ಕರಿಘೂಳೇಶ್ವರ, ಮುರುಘೇಂದ್ರರ ಭಾವಚಿತ್ರಗಳು.

೩. ಮುರುಘೇಂದ್ರಸ್ವಾಮಿಗಳು ಪ್ರಥಮಬಾರಿಗೆ ಅನುಷ್ಠಾನಗೈದ ಯಾಕಂಬರಿ ಕ್ಷೇತ್ರ.

೪. ಹಿಂದೂ ಮುಸ್ಲಿಂರ ಕೋಮುಸೌಹಾರ್ದತೆಯ ಸಂಕೇತವಾದ ಕ್ಷೇಮಲಿಂಗೇಶ್ವರ ದೇವಾಲಯ ಮತ್ತು ಯಾಕುಬ್‌ಸಾಬ್ ಉಸ್ಮಾನ್‌ಪಾಶಾನ ಸಮಾಧಿ.

೫. ಯಾಕಂಬರಿ ಕ್ಷೇತ್ರದ ಕ್ಷೇಮಲಿಂಗೇಶ್ವರ ದೇವರ ವಿಗ್ರಹ.

೬. ಮುರುಘೇಂದ್ರಸ್ವಾಮಿ ಮತ್ತು ಅವರ ಪತ್ನಿ ಮಾಣಿಕ್ಯಮ್ಮ.

೭. ಮುರುಘೇಂದ್ರಸ್ವಾಮಿಯ ಉಪಪತ್ನಿ ಶಂಕರಮ್ಮ (ಜೀವಂತ).

೮. ಮುರುಘೇಂದ್ರಸ್ವಾಮಿಯ ಸಮಾಧಿಯ ಗುಡಿ.

೯. ಮುರುಘೇಂದ್ರಸ್ವಾಮಿಯ ಸಮಾಧಿಗುಡಿಯ ಒಳನೋಟ.

೧೦. ಮುರುಘೇಂದ್ರಸ್ವಾಮಿಯ ಜಾತ್ರಾಉತ್ಸವದ ಪಲ್ಲಕ್ಕಿ.

# ಶ್ರೀ ಕರಿಘೂಳೇಶ್ವರ

ತತ್ವ ಪದಗಳು ಭಾಗ -1

1. ಶ್ರೀ ಗಣನಾಯಕನೆ
2. ಚಂದ್ರರ್ಕ ಕೋಟಿತೇಜಾ
3. ಕಣ್ಣನಲ್ಲಿ
4. ಹರನ ಭಜಿಸಲಿಲ್ಲಾ
5. ಏನು ಬೇಡಲಿ
6. ಇಲ್ಲ ಇಲ್ಲ
7. ಶ್ರೀ ಗುರುರಾಯರು


ಶ್ರೀ ತಿಮ್ಮಪ್ಪ ಈಟೇಕರ್


ಎಸ್. ನಾಗೇಶದತ್ತ

ಗಾಯಕರು : ಶ್ರೀ ತಿಮ್ಮಪ್ಪ ಈಟೇಕರ್, ರಾಯಚೂರ್
ಡೋಲಕ ಸಾಥಿ : ಎಸ್. ನಾಗೇಶದತ್ತ, ರಾಂಪೂರ
ಹಾರ್ಮೋನಿಯಂ ಸಾಥಿ : ಟಿ. ನರಸಣ್ಣ, ರಾಯಚೂರು
ತಾಳ: ಎಸ್. ರಮೇಶ್, ರಾಯಚೂರು
ಮಧು, ರಾಂಪೂರ, ಗುರುಲಿಂಗಪ್ಪ ನಟೇಕರ, ಎಡ್ಡಳ್ಳಿ

P K D : 03-2002

ಕ್ಯಾಸೆಟ್ ದೊರೆಯುವ ಸ್ಥಳ :
ವರಕವಿ ಮುರುಗೇಂದ್ರ ಸ್ವಾಮಿ ಮಠ, ಯಾದಗೀರ

© & ℗ Ashwini Recording Company MARKETED BY : Arun Audio
No.11, 1st Cross, Gandhinagar, Bangalore-09 Ph :2267523, 3392133
Recorded at Ashwini Digital Studios DESIGNED BY : Ashwini Chitralaya




SRI KARIGHULESHWRA
THATWA GEETEGALU Part -1
ALC 1653
DIGITAL

ಶ್ರೀ ಕರಿಘೂಳೇಶ್ವರ




# ಶ್ರೀ ಕರಿಘೂಳೇಶ್ವರ

ತತ್ವ ಪದಗಳು ಭಾಗ -2

1. ಅಲಿ ಪೂರದಲ್ಲಿ
2. ಸಾಕು ಸಾಕು
3. ಯಾಕೆ ಸಂಸಾರ
4. ದೇಶ ದೇಶವೂ
5. ಹುಸೇನ ಸಾಹೇಬರ
6. ಯಂದಾದರೊಂದುದಿನ


ಶ್ರೀ ತಿಮ್ಮಪ್ಪ ಈಟೇಕರ್


ಎಸ್. ನಾಗೇಶದತ್ತ

ಗಾಯಕರು : ಶ್ರೀ ತಿಮ್ಮಪ್ಪ ಈಟೇಕರ್, ರಾಯಚೂರ್
ಡೋಲಕ ಸಾಥಿ : ಎಸ್. ನಾಗೇಶದತ್ತ, ರಾಂಪೂರ
ಹಾರ್ಮೋನಿಯಂ ಸಾಥಿ : ಟಿ. ನರಸಣ್ಣ, ರಾಯಚೂರು
ತಾಳ: ಎಸ್. ರಮೇಶ್, ರಾಯಚೂರು
ಮಧು, ರಾಂಪೂರ, ಗುರುಲಿಂಗಪ್ಪ ನಟೇಕರ, ಎಡ್ಡಳ್ಳಿ

P K D : 03-2002

ಕ್ಯಾಸೆಟ್ ದೊರೆಯುವ ಸ್ಥಳ :
ವರಕವಿ ಮುರುಗೇಂದ್ರ ಸ್ವಾಮಿ ಮಠ, ಯಾದಗೀರ

© & ℗ Ashwini Recording Company MARKETED BY : Arun Audio
No 11, 1st Cross, Gandhinagar, Bangalore-09 Ph :2267523, 3392133
Recorded at Ashwini Digital Studios DESIGNED BY : Ashwini Chitralaya




SRI KARIGHULESHWRA
THATWA GEETEGALU Part -2
ALC 1652
M.R.P Rs. 30/-
DIGITAL

ಶ್ರೀ ಕರಿಘೂಳೇಶ್ವರ



ಮುರುಘೇಂದ್ರಸ್ವಾಮಿಯ ಭಾವಚಿತ್ರ




ಮುರುಘೇಂದ್ರಸ್ವಾಮಿಯ ಸಮಾಧಿಯ ಗುಡಿ



ಮುರುಘೇಂದ್ರಸ್ವಾಮಿಯ ಸಮಾಧಿಗುಡಿಯ ಒಳನೋಟ



ಹಿಂದೂ ಮುಸ್ಲಿಂರ ಕೋಮುಸೌಹಾರ್ದತೆಯ ಸಂಕೇತವಾದ ಕ್ಷೇಮಲಿಂಗೇಶ್ವರ ದೇವಾಲಯ ಮತ್ತು ಯಾಕುಬ್‌ಸಾಬ್ ಉಸ್ಮಾನ್‌ಪಾಶಾನ ಸಮಾಧಿ



## ೫. ಪರಾಮರ್ಶನ ಗ್ರಂಥಗಳು


೧. ಅಬ್ದುಲ್ ಹಮೀದ್, *'ಸೂಫಿ ಪಥ ಮತ್ತು ಶರಣಪಥಗಳ ತೌಲನಿಕ ಅಧ್ಯಯನ'*, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೮

೨. ಅಮರೇಶ ನುಗಡೋಣಿ, *'ಹೈದರಾಬಾದ್-ಕರ್ನಾಟಕದ ಹಾಡುಪಾಡು'*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೩

೩. ಅಲ್ಲಾಳ ಎಲ್.ಬಿ.ಕೆ., *'ವೈರಾಗ್ಯ ಚಕ್ರವರ್ತಿ ಶ್ರೀಕರಿಘೂಳೇಶ್ವರ ಮಹಾತ್ಮೆ'* (ಮೂರು ಮುತ್ತುಗಳು), ಪ್ರಕಟಣೆ ಶ್ರೀರಾಮಲಿಂಗೇಶ್ವರ ತರುಣ ಸಂಘ, ಹಂಗನಹಳ್ಳಿ, ತಾ.ಸೇಡಂ, ೧೯೯೩

೪. ಅಮೃತಾ ಕಟಕೆ, *'ಹೈದರಬಾದ್-ಕರ್ನಾಟಕದ ನಾಟಕ ಸಾಹಿತ್ಯ: ಒಂದು ಅಧ್ಯಯನ'*, ಯಮುನಾ ಪ್ರಕಾಶನ, ೨೦೦೨, ಗುಲಬರ್ಗಾ

೫. ಕೃಷ್ಣ ಪರಮೇಶ್ವರ ಭಟ್, *'ಕನ್ನಡ-ತೆಲುಗು ದ್ವಿಭಾಷಿಕತೆಯ ಅಧ್ಯಯನ'*, ಪಿ.ಎಚ್.ಡಿ ಪ್ರಬಂಧ, ಅಪ್ರಕಟಿತ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೮೩

೬. ಗೋಪಾಲರಾವ್ ಹೇಜೀಬ್, *'ಹೈದರಬಾದ್ ಮುಕ್ತಿ ಸಂಘರ್ಷ'*, ರಾಷ್ಟ್ರೋತ್ಥಾನ ಸಾಹಿತ್ಯ ಪ್ರಕಾಶನ, ಬೆಂಗಳೂರು, ೨೦೦೧

೭. ಚಂದ್ರಶೇಖರ್ ಪ್ರೊ. ಎಸ್., *'ಆಧುನಿಕ ಕರ್ನಾಟಕದ ಆಂದೋಲನಗಳು'*, ೨೦೦೨

೮. ಎಂ.ಚಿದಾನಂದ ಮೂರ್ತಿ, *'ವೀರಶೈವ ಧರ್ಮ:ಭಾರತೀಯ ಸಂಸ್ಕೃತಿ'* (ಹಿಂದೂ:ಲಿಂಗಾಯತ), ಮಿಂಚು ಪ್ರಕಾಶನ, ೨೦೦೨, ವಿಜಯನಗರ, ೨ನೇ ಹಂತ, ಬೆಂಗಳೂರು

೯. ತಿಪ್ಪೇರುದ್ರಸ್ವಾಮಿ ಎಚ್., *'ಕನ್ನಡದಲ್ಲಿ ಕೈವಲ್ಯ ಸಾಹಿತ್ಯ'*, ಚಿತ್ತರಗಿ ಶ್ರೀವಿಜಯ ಮಹಾಂತೇಶ್ವರ ಧರ್ಮ ಪ್ರಸಾರಕ ಮಂಡಲ, ಇಲಕಲ್ಲು, ೧೯೮೩

೧೦. ನಲವಡಿ ಶ್ರೀಕಂಠಶಾಸ್ತ್ರಿ, *'ಹೈದಾರಬಾದ್-ಕರ್ನಾಟಕ ರಜಾಕಾರರ ಲಾವಣಿ'*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮

೧೧. ಪ್ರಭು ಖಾನಾಪುರ, *'ಮುಸ್ಲಿಂ ತತ್ವಪದಕಾರರು'*

೧೨. ಬಸವರಾಜ ಎಸ್., ಹಿರೇಮಠ, 'ಗುಲಬರ್ಗಾ ಜಿಲ್ಲೆಯ ಬೈಲುಪತ್ತಾರರ ಸಮಾಜಶಾಸ್ತ್ರೀಯ ಅಧ್ಯಯನ' ೨೦೦೩, ಎಂ.ಫಿಲ್. ಸಂಪ್ರಬಂಧ, ಅಪ್ರಕಟಿತ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೩. ಬಸವರಾಜ ಸಬರದ (ಸಂ) 'ಹೈದರಬಾದ್-ಕರ್ನಾಟಕದ ತತ್ವಪದಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦

೧೪. ಬಸವರಾಜ ಕಲ್ಗುಡಿ, 'ಮಧ್ಯಕಾಲೀನ ಅನುಭವ ಸಾಹಿತ್ಯ', ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೮

೧೫. ಬಸವರಾಜ ಸಬರದ, 'ಗುಲಬರ್ಗಾ ಜಿಲ್ಲೆಯ ಅನುಭಾವಿ ಕವಿಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೫.

೧೬. ಭೀಮಸೇನರಾವ್ ತವಗ, 'ಗುಲಬರ್ಗಾ ಅಥವಾ ಕಲಬುರ್ಗಿ', ೧೯೯೨

೧೭. ಮಹಾಬಲೇಶ್ವರಪ್ಪ ಬಿ.ಸಿ., 'ಹೈದರಬಾದ್-ಕರ್ನಾಟಕದ ರಾಜಕೀಯ ಚಳುವಳಿಗಳು', ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೭

೧೮. ಮಹಾಬಲೇಶ್ವರಪ್ಪ ಬಿ.ಸಿ., 'ಹೈದರಬಾದ್-ಕರ್ನಾಟಕದ ಸ್ವಾತಂತ್ರ ಚಳುವಳಿ', ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೧೯೯೪

೧೯. ಮಲ್ಲಿಕಾರ್ಜುನಯ್ಯ, 'ಆಂಧ್ರ-ಕರ್ನಾಟಕ ಗಡಿಭಾಗದ ಮುಸ್ಲಿಂ ಬಾಂಧವ್ಯ'

೨೦. ರಂಗರಾಜ ವನದುರ್ಗ, 'ಹೈದರಬಾದ್ ಸಂಸ್ಥಾನ, ಸ್ವಾತಂತ್ರ್ಯ ಸಂಗ್ರಾಮದ ಶಿಖರಗಳು'

೨೧. ರಹಮತ್ ತರೀಕರೆ, 'ಕರ್ನಾಟಕದ ಸೂಫಿಗಳು', ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೨. ವೀರಣ್ಣ ದಂಡೆ, 'ಹೈದಾರಬಾದ್ ಸಂಸ್ಥಾನದ ವಿಮೋಚನಾ ಚಳುವಳಿ

೨೩. ಶಿವಾನಂದ ವಿ., (ಸಂ) 'ಹೈದಾರಬಾದ್-ಕರ್ನಾಟಕ ಭಾಗದ ಕನ್ನಡ ಶಿಲಾಶಾಸನಗಳು', ಕನ್ನಡಪೀಠ: ಬನಾರಸ್ ಹಿಂದೂ ವಿಶ್ವವಿದ್ಯಾಲಯ, ವಾರಣಾಸಿ

೨೪. ಸಂಗಮೇಶ ಹಂಡಗಿ, 'ಶ್ರೀಜಚನಿ ವಚನ ಸಾಹಿತ್ಯ: ಒಂದು ಅಧ್ಯಯನ', ಶ್ರೀ ಜಚನಿ ಅಧ್ಯಯನ ಪೀಠ ಮತ್ತು ಸಂಶೋಧನ ಸಂಸ್ಥೆ, ೪೯, ಹ.ಭ.ಸಮಾಜ ರಸ್ತೆ, ಬಸವನಗುಡಿ, ಬೆಂಗಳೂರು-೦೪

೨೫. ಸುನಂದ ಟಿ.ಎಸ್., 'ದಾಸಸಾಹಿತ್ಯದಲ್ಲಿ ಜಾನಪದ'

೨೬. ಸುಂದರಂ ಆರ್.ವಿ.ಎಸ್., 'ಕರ್ನಾಟಕ-ಆಂಧ್ರ ಸಾಹಿತ್ಯ ಬಾಂಧವ್ಯ', ಪಿ.ಎಚ್.ಡಿ ಪ್ರಬಂಧ, ಅಪ್ರಕಟಿತ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨೭. ಡಾ. ಹರಿಶ್ಚಂದ್ರ ದಿಗ್ಸಂಗಿಕರ್, '*ದಲಿತ ತತ್ತ್ವಪದಕಾರ ಜಂಬಗಿ ಶರಣ*', ಅಭಯ ಪ್ರಕಾಶನ, ೨೦೦೩, ಗುಲಬರ್ಗಾ

೨೮. ಹರಿಶ್ಚಂದ್ರ ಎನ್.ದಿಗ್ಸಂಗಿಕರ್, '*ಸಾವಳಗಿ ಮಹಮದ್‌ಸಾಬ ಅವರ ಲಾವಣಿ ಹಾಗೂ ಗೀಗಿ ಪದಗಳು*' ಪಿ.ಎಚ್.ಡಿ ಪ್ರಬಂಧ, ಅಪ್ರಕಟಿತ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೨೯. ಹಿರೇಮಲ್ಲೂರು ಈಶ್ವರನ್, '*ಲಿಂಗಾಯತ ಧರ್ಮ: ಒಂದು ಅಧ್ಯಯನ*', ಪ್ರಿಯದರ್ಶಿನಿ ಪ್ರಕಾಶನ, ೧೯೯೭, ಬೆಂಗಳೂರು-೪೦

೩೦. ಡಿ.ಬಿ.ನಾಯಕ ಮತ್ತು ಎಂ.ಎಸ್.ಪಾಟೀಲ್ (ಸಂ) '*ಕನ್ನಡದಲ್ಲಿ ಅನುಭಾವ ಸಾಹಿತ್ಯ*', ೨೦೦೩, ಬಂಜಾರ ಪ್ರಕಾಶನ, ಗುಲಬರ್ಗಾ

೩೧. ನವೋದಯ ಸಾಹಿತ್ಯದಲ್ಲಿ ಅನುಭಾವದ ಅಂಶಗಳು

೩೨. ಕರ್ನಾಟಕದ ವೀರಶೈವ ಮಠಗಳು

## ೬. ವಕ್ತೃಗಳ ವಿವರ

| ಕ್ರ.ಸಂ. | ಹೆಸರು | ವಯಸ್ಸು | ವೃತ್ತಿ | ಊರು | ಜಾತಿ |
|---|---|---|---|---|---|
| ೧. | ಕುಮಾರ ಡಿ.ಎಲ್. | ೪೫ | ನಾಟಕದ ಮೇಷ್ಟ್ರು | ಯಾದಗಿರಿ | ಲಿಂಗಾಯತ |
| ೨. | ಭೀಮಣ್ಣಕಟ್ಟೀಮನಿ | ೬೫ | ಹಣ್ಣಿನ ವ್ಯಾಪಾರಿ | ಯಾದಗಿರಿ | ಉಪ್ಪಾರ |
| ೩. | ಬುಗ್ಗಪ್ಪ ಕೋನಪ್ಪ | ೪೦ | ವ್ಯವಸಾಯ | ಕೋನಾಪುರ | ಕಬ್ಬಲಿಗ |
| ೪. | ಮಲ್ಲಣಗೌಡ ನಾಚವಾರ | ೪೫ | ವ್ಯವಸಾಯ | ನಾಚವಾರ | ರೆಡ್ಡಿ |
| ೫. | ರಾಮಯ್ಯ | ೪೫ | ವ್ಯವಸಾಯ | ಎಲೆರಾಚೋಳ | ಜಂಗಮ |
| ೬. | ಶಂಕರಮ್ಮ | ೬೫ | ಮನೆಗೆಲಸ | ಎಲೆರಾಚೋಳ | ಜಂಗಮ |
| ೭. | ಶರಣಮ್ಮ | ೩೮ | ಮನೆಗೆಲಸ | ಎಲೆರಾಚೋಳ | ಜಂಗಮ |

